॥ ಶ್ರೀ ವಿದ್ಯಾಶಂಕರೋ ವಿಜಯತೇ ॥

# ಆತ್ಮಜ್ಞಾನ ಲಹರಿ

(ಅಧ್ಯಾತ್ಮ ಗೀತೆಗಳ ಸಂಗ್ರಹ)

ಬ್ರಹ್ಮಜ್ಞಕವಿ ಶ್ರೀದೇವರಾಯ ಕುಲಕರ್ಣಿ

(ಹೊಂಬಳ)

**"ATMAJNANA LAHARI"** —
written by **Brahmajnakavi Sri Devaraya Kulakarni (Hombala)**
Published by

| | | |
|---|---|---|
| Third Edition | : | 2015 |
| Copies | : | 500 |
| Pages | : | 108 |
| Price | : | Rs. 50/- |
| © | : | Author |

**ಆತ್ಮಜ್ಞಾನ ಲಹರಿ**
ಬ್ರಹ್ಮಜ್ಞಕವಿ ಶ್ರೀದೇವರಾಯ ಕುಲಕರ್ಣಿ (ಹೊಂಬಳ)

| | | |
|---|---|---|
| ಪ್ರಕಾಶಕರು | : | |
| ತೃತೀಯ ಮುದ್ರಣ | : | 2015 |
| ಹಕ್ಕುಗಳು | : | ಲೇಖಕರದು |
| ಪುಟಗಳು | : | 108 |
| ಬೆಲೆ | : | ರೂ. 50/- |
| ಪ್ರತಿಗಳು | : | 500 |
| ಮುದ್ರಣ | : | ಮಾರುತಿ ಪ್ರಿಂಟಿಂಗ್ ಪ್ರೆಸ್<br>ಬೆಂಗಳೂರು-26<br>ಮೊ.: 9964502993 |

## ಲಹರಿಯಲ್ಲಿಳಿಯುವ ಮೊದಲು

ಅಧ್ಯಾತ್ಮ ಗೀತೆಗಳ ಸಂಗ್ರಹವಾದ ಅತ್ಮಜ್ಞಾನ ಲಹರಿಯು ಮೂರನೆಯ ಬಾರಿ ಮುದ್ರಣ ಕಾಣುತ್ತಿರುವದು ಅತ್ಯಂತ ಸಂತಸದಾಯಕ ವಿಷಯವಾಗಿದೆ. ವಿಷಯವಾಸನೆಗಳು ಬಲವಾಗಿ ಇಂದ್ರಿಯಲೋಲುಪತೆಗೆ ಒಳಗಾಗುತ್ತಿರುವ ಬಹುಸಂಖ್ಯಾತರಿಂದ ಒಳಗೊಂಡಿರುವ ಈ ಸಮಾಜದಲ್ಲಿ ಅಧ್ಯಾತ್ಮ ಗೀತೆಗಳ ಕಡೆಗೆ ಕೆಲವರಾದರೂ ಗಮನ ಕೊಡುತ್ತಿರುವದು ಸಮಾಧಾನಕರ ಮತ್ತು ಸಂತೋಷಕರವಾದ ಸಂಗತಿ. ಸುಮಾರು ಐದು ದಶಕಗಳ ಹಿಂದೆ ಶ್ರೀ ದೇವರಾವ ಕುಲಕರ್ಣಿಯವರು ಈ ಸಂಗ್ರಹವನ್ನು ಪ್ರಕಟಿಸಿದ್ದರು. ಆ ಎಲ್ಲ ಪ್ರತಿಗಳು ಮುಗಿದ ಕಾರಣ ಸುಮಾರು ಒಂದು ದಶಕದ ಹಿಂದೆ ಕಿರೇಸೂರಿನ ಶ್ರೀ ದಾಸೋ ನಾರಾಯಣ ಕುಲಕರ್ಣಿಯವರು ಶ್ರೀ ದೇವರಾವ ಕುಲಕರ್ಣಿಯವರ ಒಪ್ಪಿಗೆ ಪಡೆದು ಆತ್ಮಜ್ಞಾನ ಲಹರಿಯ ಎರಡನೇಯ ಅವೃತ್ತಿಯನ್ನು ಪ್ರಕಟಿಸಿದರು. ಆ ಆವೃತ್ತಿಯ ಎಲ್ಲ ಪ್ರತಿಗಳು ಖಾಲಿಯಾದ ಕಾರಣ ಈಗ ಮೂರನೆಯ ಮುದ್ರಣವನ್ನು ಈ ಲಹರಿ ಕಾಣುತ್ತಲಿದೆ. ಈ ಮುದ್ರಣದ ಮತ್ತು ಪ್ರಕಾಶನದ ಹೊಣೆಗಾರಿಕೆಯನ್ನು ಹೊತ್ತಿರುವ ಎಲ್ಲ ಮಹನೀಯರಿಗೆ ಹೃತ್ಪೂರ್ವಕ ಅಭಿನಂದನೆಗಳು.

ಆತ್ಮಜ್ಞಾನ ಲಹರಿಯು ಅನೇಕ ಸಣ್ಣ ಮತ್ತು ದೊಡ್ಡ ಪ್ರವಾಹಗಳಿಂದೊಡಗೂಡಿದ ಮಹಾ ಅಲೆಯಾಗಿದೆ. ಇಲ್ಲಿ ಸಣ್ಣ ಮತ್ತು ದೊಡ್ಡ ಎಂಬ ಶಬ್ದಗಳನ್ನು ಸಂಖ್ಯಾತ್ಮಕವಾಗಿ ಉಪಯೋಗಿಸಲಾಗಿದೆಯೇ ಹೊರತಾಗಿ ಗುಣಾತ್ಮಕವಾಗಿ ಅಲ್ಲ. ಏಕೆಂದರೆ ಎಲ್ಲ ಲಹರಿಗಳಲ್ಲಿಯೂ ಹರಿಯುತ್ತಿರುವ ಜ್ಞಾನ ಗಂಗೆ ಏಕರೂಪವಾಗಿದ್ದಾಳೆ. ದಾವಣಗೇರಿಯಲ್ಲಿ ಹಿಂದಿ ಶಿಕ್ಷಕರಾಗಿದ್ದ ಶ್ರೀಮತಿ ನಾಗಮ್ಮ ಅವರ ಒಂದೇ ಪ್ರವಾಹ ಈ ಲಹರಿಯಲ್ಲಿದ್ದು ಅದು ಸದ್ಗುರುವಿನ ಲಕ್ಷಣ, ಸ್ವಭಾವ ಮತ್ತು ಅಂಥವರನ್ನು ಗುರುವಾಗಿ ಪಡೆಯಬೇಕಾದರೆ ಪೂರ್ವಸಂಚಿತ ಭಾಗ್ಯಬೇಕಾಗುತ್ತದೆ ಎಂಬ ಸಂಗತಿಯನ್ನು ತಿಳಿಸುತ್ತದೆ. ಕೋಳಿವಾಡದ ಕೃಷ್ಣಕ್ಕ ರಚಿಸಿದ ಎರಡು ಗೀತೆಗಳು ಈ ಲಹರಿಯಲ್ಲಿ ಮಹತ್ವವನ್ನು ಪಡೆದಿವೆ. ಒಂದರಲ್ಲಿ ಬಂಧನ ಬಿಡಿಸಿದ ಸದ್ಗುರುವನ್ನು ನಮಿಸಿದರೆ ಮತ್ತೊಂದರಲ್ಲಿ ಗುರುವಿನಲ್ಲಿಯೇ ತ್ರ್ಯಂಬಕೇಶ್ವರ, ಪ್ರಯಾಗ, ವಾರಾಣಸಿ, ಗಯಾ, ಅಯೋಧ್ಯೆ, ಮಥುರಾ,

ವೃಂದಾವನ, ಹರಿದ್ವಾರ, ಬದರಿ, ಕೇದಾರ ಮುಂತಾದ ಪುಣ್ಯ ಕ್ಷೇತ್ರಗಳು ಹಾಗೂ ಆ ಕ್ಷೇತ್ರಾಧಿದೇವತೆಗಳು ಇರುವ ಸಂಗತಿಯನ್ನು ತಿಳಿಸುತ್ತ ಸಮಸ್ತ ಭಾರತದ ದರ್ಶನ ಮಾಡಿಸುತ್ತದೆ. ಜಯಲಕ್ಷ್ಮೀ ಇನಾಮದಾರ ಅವರು ಶ್ರೇಷ್ಠ ಗಮಕಿಗಳು ಮತ್ತು ಶ್ರೀ ದೇವರಾವ ಕುಲಕರ್ಣಿಯವರ ಆತ್ಮೀಯ ಶಿಷ್ಯರೂ ಸಹ. ಗುರುವಿನಿಂದ ಪ್ರಭಾವಿತರಾದ ಅವರು ಕೆಲವು ಪದ್ಯಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಏಳು ಪದ್ಯಗಳು ಈ ಲಹರಿಯಲ್ಲಿ ಬಂದು ಸೇರಿವೆ. ಆರಂಭದಲ್ಲಿ ಗುರುವಿಗೆ ಶರಣಾಗುವಿಕೆ, ಅದರಿಂದ ದೇಹಾಭಿಮಾನದ ತ್ಯಾಗ, ತನ್ಮೂಲಕ ದೇಹ ತಾನಲ್ಲವೆಂಬ ವಿವೇಕ ಹಾಗೂ ಕೊನೆಯಲ್ಲಿ ಆತ್ಮಾನಂದದ ಸ್ವರೂಪ–ಈ ಎಲ್ಲ ವಿವರಣೆಯನ್ನು ಈ ಪದ್ಯಗಳಲ್ಲಿ ಕಾಣಬಹುದಾಗಿದೆ. ಶಲವಡಿಯ ಸದಾಶಿವರಾಯರು ಶ್ರೀ ದೇವರಾವ ಕುಲಕರ್ಣಿಯವರ ಆತ್ಮೀಯರಾದವರಲ್ಲಿ ಒಬ್ಬರು. ಅವರೂ ಸಹ ಶ್ರೀ ದೇವರಾವ ಕುಲಕರ್ಣಿಯವರನ್ನು ಗುರುವೆಂದು ಭಾವಿಸಿ ಅವರಿಂದ ಪ್ರಭಾವಿತರಾಗಿ ಗೀತೆಗಳನ್ನು ರಚಿಸಿದವರು. ಅವರ ಹತ್ತು ಗೀತೆಗಳು ಈ ಲಹರಿಯ ಭಕ್ತಿವೇಗವನ್ನು ವರ್ಧಿಸಿವೆ. ಇಂದ್ರಿಯ ಸುಖಗಳ ಬೆನ್ನು ಹತ್ತಿರುವ ನನಗೆ 'ನಿಜ ಮುಕುತಿಯ ಪಥವಾ ತೋರಿಸಿ' ಎಂದು ಗುರುವನ್ನು ಕೇಳಿಕೊಂಡಾಗ **ವೇದದ ಸಾರವ ತಿಳಿಸಿ, ವಾದದ ಛಲವ ಅಳಿಸಿ, ಚಿತ್ತಕೆ ಶಾಂತಿಯನು ತರಿಸಿದ** ಗುರುವನ್ನು ಕೊಂಡಾಡುತ್ತಾರೆ. ಆತ್ಮಜ್ಞಾನದ ಪಥದಲ್ಲಿದ್ದಾಗ **ಕರ್ಮದ ಮರ್ಮ ಅರಿತು ಅದು ಮೋಕ್ಷಕೆ ಕಂಟಕ** ಎಂದು ತಿಳಿಸುತ್ತಾರೆ. ಕೊನೆಯಲ್ಲಿ ಆತ್ಮಾನಂದವನ್ನು **ಎಂದಿಗೂ ಪೋಗದ ನಿತ್ಯ ಸುಖ** ಎಂದು ಸಾರುವದನ್ನು ನಾವು ಕಾಣಬಹುದಾಗಿದೆ.

ಈ ಲಹರಿಯಲ್ಲಿ ಪ್ರಕಾಂಡ ಪಂಡಿತ, ಉತ್ತಮ ವಾಗ್ಮಿ, ಶಾಂಕರವೇದಾಂತನ್ನು ಕರಾತಲಾಮಲಕ ಮಾಡಿಕೊಂಡ, ಶ್ರೀ ದೇವರಾವ ಕುಲಕರ್ಣಿಯವರಿಗೆ ಗುರುವಾಗಿ ವೇದಾಂತ ಪರಿಚಯಿಸಿದ ಬ್ರಹ್ಮಶ್ರೀ ಶ್ರೀ ಶಂಕರ ಭಟ್ಟ ಅಗ್ನಿಹೋತ್ರಿಯವರ ಇಪ್ಪತ್ತು ಗೀತೆಗಳೂ ಇದ್ದು ಅವೆಲ್ಲವೂ ಅಧ್ಯಾತ್ಮಗಂಗಾ ನದಿಯ ಘಾಟಗಳೋಪಾದಿಯಲ್ಲಿವೆ. ಯಾವ ರೀತಿಯಾಗಿ ಗಂಗಾ ನದಿಯ ಮೇಲಿರುವ ಪ್ರತಿಯೊಂದು ಘಾಟುಗಳಿಗೆ ಒಂದೊಂದು ವೈಶಿಷ್ಟ್ಯವಿದೆಯೋ ಅದೇ ರೀತಿಯಾಗಿ ಇಲ್ಲಿರುವ ಇಪ್ಪತ್ತು ಪದ್ಯಗಳು ಅಧ್ಯಾತ್ಮ ಮಾರ್ಗದಲ್ಲಿ ಕ್ರಮಿಸುವವರಿಗೆ ಅಗತ್ಯವಾಗಿರುವ ಅಂಶಗಳನ್ನು ಕಾವ್ಯಾತ್ಮಕವಾಗಿ, ರೂಪಕಾತ್ಮವಾಗಿ ಹಾಗೂ ಉಪದೇಶಾತ್ಮಕವಾಗಿ ತಿಳಿಸುವದರಿಂದ ವಿಶಿಷ್ಟವಾಗಿವೆ. ಮುಕ್ತ ಪುರುಷನ ಲಕ್ಷಣವನ್ನು ತಿಳಿಸುವಾಗ ಅತಿವ್ಯಾಪ್ತಿ ದೋಷ ಹೇಗೆ ಬರುವದು ಎಂಬುದನ್ನು ಪಾಂಡಿತ್ಯ ಪೂರ್ಣವಾಗಿ ನಿರೂಪಿಸುತ್ತಾರೆ. ದೇಹವನ್ನು ಗೂಡಿಗೆ ಹೋಲಿಸಿ ಆತ್ಮನನ್ನು ಹಕ್ಕಿಗೆ ಹೋಲಿಸಿ ದೇಹ ನಿತ್ಯವಲ್ಲವೆಂಬುದನ್ನು ರೋಚಕವಾಗಿ

ತೋರಿಸಿದ್ದಾರೆ. ಇನ್ನೊಂದು ಪದ್ಯದಲ್ಲಿ ದೇಹವನ್ನು ಗೃಹವೆಂದು ಭಾವಿಸಿ ಆತ್ಮನನ್ನು ದೇವರೆಂದು ಭಾವಿಸಿ ಅಲ್ಲಿ ನಡೆಯುವ ಪೂಜಾವಿಧಾನವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ದೇಹವೇ ತಾನೆಂದು ಬಗೆದಿರುವ ಜೀವಾತ್ಮನನ್ನು ದೆವ್ವಕ್ಕೆ ಹೋಲಿಸಿ ರಚಿಸಿದ ದುರ್ಗಾ ರಾಗದ ಪದ್ಯವು ಮನುಷ್ಯನ ಅಜ್ಞಾನವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಅವಸ್ಥಾತ್ರಯವನ್ನು ದಾಟಿ ಇರುವ ಆತ್ಮನನ್ನು ಅರಿಯದಿರುವ ಜನರನ್ನು ಕಂಡು **ಅಳುವು ಬರುತಿದೆ ಎನಗೆ ಅಳುವು ಬರುತಿದೆ** ಎಂದು ಹೇಳುವಲ್ಲಿ ಮಾರ್ದವ ಹೃದಯ ಕಾಣುವದು. **ಹೇಗೆ ಸೇವಿಸಲಯ್ಯಾ ಶ್ರೀ ಗುರುವೇ ನಿನ್ನ** ಎಂಬ ಪದ್ಯದಲ್ಲಿ ಆತ್ಮನು ಯಾವ ಪ್ರಮಾಣಗಳಿಗೂ ಗೋಚರನಲ್ಲ ಎಂದು ಪರೋಕ್ಷವಾಗಿ ತಿಳಿಸಿರುವರು. ಶ್ರೀ ಶಂಕರ ಭಟ್ಟರ ಪದ್ಯಗಳೆಲ್ಲವೂ ಅವರ ಪ್ರಖರ ಪಾಂಡಿತ್ಯದಲ್ಲಿ ಬೆಳಗುವದನ್ನು ಕಾಣಬಹುದಾಗಿದೆ. ಅವರ ಎಲ್ಲ ಪದ್ಯಗಳಲ್ಲಿ ನಾರಾಯಣ ನಾಮಾಂಕನವಿರುವದನ್ನು ಗುರುತಿಸಬಹುದು.

ಉಲ್ಲೇಖಿತ ಐವರ ರಚನೆಗಳನ್ನು ಬಿಟ್ಟರೆ ಉಳಿದ ಎಲ್ಲ ರಚನೆಗಳು ಶ್ರೀ ದೇವರಾವ ಇವರಿಂದ ರಚಿತವಾಗಿವೆ. ವೇದಾಂತ ಚತುರ, ಬ್ರಹ್ಮಜ್ಞ ಕವಿ, ಅಭಿನವ ಯಾಜ್ಞವಲ್ಕ್ಯ ಮುಂತಾದ ಬಿರುದಾಂಕಿತ ಶ್ರೀ ದೇವರಾವ ಅವರ ಗೀತೆಗಳಲ್ಲಿ ಅವರ ಜೀವನವೇ ಬಿಂಬಿತವಾಗಿರುವದನ್ನು ಕಾಣಬಹುದಾಗಿದೆ. ನವಕೋಟಿ ನಾರಾಯಣ ಭಗವಂತನ ಅಪೇಕ್ಷೆಯಂತೆ ಪುರಂದರ ದಾಸರಾಗಿ ಪುರಂದರವಿಠಲ ನಾಮಾಂಕನದಿಂದ ಪದ್ಯಗಳನ್ನು ರಚಿಸಿದಂತೆ ಆಗರ್ಭ ಶ್ರೀಮಂತರಾದ ಹೊಂಬಳದ ಶ್ರೀ ದೇವರಾವ ಅವರು ಭಗವದಿಚ್ಛೆಯಂತೆ ಅಕಿಂಚನರಾಗಿ ಶ್ರೀ ಗುರು ದತ್ತಾತ್ರಯರ ಅನುಗ್ರಹದಿಂದ ಶಂಕರಾರ್ಯ, ಗುರುಶಂಕರ, ಶಂಕರಗುರು ನಾಮಾಂಕನದಿಂದ ಅನೇಕ ಪದ್ಯಗಳನ್ನು ರಚಿಸಿದ್ದಾರೆ. ಅಗ್ನಿಹೋತ್ರಿ ಶಂಕರಭಟ್ಟರು ಅವರಿಗೆ ಶಾಂಕರವೇದಾಂತವನ್ನು ಪರಿಚಯಿಸಿದರೆ ಹೊಳೇನರಸಿಪುರದ ಶ್ರೀ ಶ್ರೀ ಸಚ್ಚಿದಾನೇಂದ್ರಸರಸ್ವತಿ ಸ್ವಾಮಿಗಳು ಅವರಿಗೆ ಅದ್ವೈತ ಅನುಭೂತಿಯನ್ನುಂಟುಮಾಡಿದರು. ಆದ್ದರಿಂದ ಅವರ ಪದ್ಯಗಳಲ್ಲಿ ಜ್ಞಾನ ಮತ್ತು ಭಕ್ತಿ ಎರಡೂ ಮೇಳವಿಸಿರುವದನ್ನು ನಾವು ಕಾಣಬಹುದಾಗಿದೆ. ಗಾಣಗಾಪುರದ ಶ್ರೀಪಾದ ಶ್ರೀ ವಲ್ಲಭಟ್ಟರನ್ನು, ನರಸೋಬವಾಡಿಯ ನರಸಿಂಹಸರಸ್ವತಿಯವರನ್ನು, ತ್ರಿಮೂರ್ತಿ ರೂಪದ ಶ್ರೀದತ್ತಾತ್ರಯರನ್ನು, ಶಂಕರಭಟ್ಟ ಅಗ್ನಿಹೋತ್ರಿಯವರನ್ನು ಮತ್ತು ಶ್ರೀ ಶ್ರೀ ಸಚ್ಚಿದಾನೇಂದ್ರಸರಸ್ವತಿ ಸ್ವಾಮಿಗಳವರನ್ನು, ಆದಿಶಂಕರಾಚಾರ್ಯರನ್ನು ಹಾಗೂ ಕೈಲಾಸಾಧಿಪತಿಯಾದ ಪರಮೇಶ್ವರನನ್ನು ಗುರುಗಳೆಂದು ಭಾವಿಸಿ ಆತ್ಮಜ್ಞಾನ ಮಾಡಿಸಲು ನಮಿಸಿರುವದನ್ನು ಕೆಲವು ಪದ್ಯಗಳಲ್ಲಿ ಕಂಡರೆ ಬೇಡಿಕೊಂಡಿರುವದನ್ನು ಹಲವು ಗೀತೆಗಳಲ್ಲಿ ಕಾಣುತ್ತೇವೆ.

ಅವರ ಬಿನ್ನಹ, ಬಯಕೆ, ಬೇಡಿಕೆ ಮುಂತಾದವುಗಳು ಹೃತ್ಪೂರ್ವಕವಾಗಿ ಹೊರಹೊಮ್ಮಿರುವದನ್ನು ಅವರ ಪದಪುಂಜಗಳು ಸ್ಪಷ್ಟಪಡಿಸುತ್ತವೆ. ಅದ್ವೈತ ವೇದಾಂತದ ಪರಿಕಲ್ಪನೆಗಳಾದ ಬ್ರಹ್ಮ ಸತ್ಯ, ಜಗನ್ಮಿಥ್ಯಾ, ಅವಸ್ಥಾತ್ರಯಾತೀತನಾದ–ಅನುಭವಗಮ್ಯನಾದ–ದೇಹಾದಿಸಂಘಾತಗಳಿಗಿಂತ ಭಿನ್ನನಾದ–ಆತ್ಮನ ಸ್ವರೂಪ ಇವುಗಳ ವಿವರಣೆ ಅವರ ಪದ್ಯಗಳಲ್ಲಿ ಪುನಃಪುನಃ ಕಂಡುಬರುತ್ತವೆ. ಆತ್ಮಜ್ಞಾನಕ್ಕೆ ಸೋಪಾನಗಳಾದ ಶ್ರವಣ, ಮನನ, ನಿದಿಧ್ಯಾಸನಗಳ ಉಲ್ಲೇಖ ಅವರ ಗೀತೆಗಳಲ್ಲಿ ತುಂಬಿಕೊಂಡಿವೆ. ಬ್ರಹ್ಮಜ್ಞಾನಕ್ಕೆ ಅಗತ್ಯವಾಗಿ ಬೇಕಾಗಿರುವ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಭೋಗವಿರಾಗ, ಶಮದಮಾದಿ ಸಾಧನಸಂಪತ್ ಮತ್ತು ಮುಮುಕ್ಷುತ್ವಗಳ ವಿವರಣೆಯನ್ನು ಅವರ ಪದ್ಯಗಳು ಹೇರಳವಾಗಿ ನೀಡುತ್ತವೆ. ಗುರೂಪದೇಶವನ್ನು ಮಳೆಗೆ, ಮುಮುಕ್ಷುತ್ವವನ್ನು ಮೋಡಕ್ಕೆ, ಸುವಿಚಾರವನ್ನು ಮಿಂಚಿಗೆ, ಶ್ರವಣವನ್ನು ಸುಳಿಗಾಳಿಗೆ, ವೈರಾಗ್ಯವನ್ನು ರಂಟೆಹೊಡೆಯುವದಕ್ಕೆ, ಪರಮಾರ್ಥವನ್ನು ಬೀಜಾರೋಪಣಕ್ಕೆ, **ನರಜನ್ಮವನ್ನು ಹೊಲಕ್ಕೆ, ಮುಕ್ತಿಯನ್ನು ಬೆಳೆಗೆ ಹೋಲಿಸಿ ರಚಿಸಿದ ಪದ್ಯದಲ್ಲಿ ಆತ್ಮಜ್ಞಾನವನ್ನು ಕೃಷಿಗೆ ಹೋಲಿಸಿ** ಜನಸಾಮಾನ್ಯರಿಗೆ ವೇದಾಂತಶಾಸ್ತ್ರದ ರಹಸ್ಯವನ್ನು ತಿಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅಜ್ಞಾನಹೋಮದಾ ಅಗ್ನಿ ಹೋತ್ರಿಯು ತಾನು ಎಂಬ ಪದ್ಯದಲ್ಲಿ ಬ್ರಹ್ಮಸಾಕ್ಷಾತ್ಕಾರದ ಪ್ರಕ್ರಿಯೆಯನ್ನು ಯಜ್ಞ ಪ್ರಕ್ರಿಯೆಯ ಮೂಲಕ ವಿವರಿಸಿ ಕರ್ಮಠರ ಕಣ್ಣುತೆರೆಯುವಂತೆ ಮಾಡಿದ್ದಾರೆ. ಸಮಯವನ್ನು ವ್ಯರ್ಥಗೊಳಿಸದೇ ಭಗವಂತನ ಸ್ಮರಣೆ ಮಾಡಲು ಗಂಟೆ ಹೊಡೆಯುತಲಿದೆ ಎಂಬ ಪದ್ಯ ಎಚ್ಚರಿಸುತ್ತಲಿದೆ. ಕೆಲವು ವಚನಗಳ ಮೂಲಕ ಮತ್ತು ಕೆಲವು ಗದ್ಯಗಳ ಮೂಲಕ ಅಜ್ಞಾನಾಂಧಕಾರ ಹೋಗಲಾಡಿಸಿ ಜ್ಞಾನಪ್ರಕಾಶ ಮೂಡಿಸುವ ಯತ್ನವನ್ನು ಇಲ್ಲಿ ಕಾಣಬಹುದಾಗಿದೆ. ಕೊನೆಯಲ್ಲಿರುವ ಭೈರವಿ ರಾಗದ ಮೂರು ಪದ್ಯಗಳು ದ್ವೈತದಿಂದ ಅದ್ವೈತದೆಡೆಗೆ, ಅಜ್ಞಾನದಿಂದ ಜ್ಞಾನದೆಡೆಗೆ ಮತ್ತು ಬಂಧನದಿಂದ ಮುಕ್ತಿಯಕಡೆಗೆ ಸಾಗುವ ಪಥವನ್ನು ವಿವರಿಸುವದಲ್ಲದೇ ಆ ಪಥ ತೋರವ ಗುರುವಿಗೆ ನಮನ ಸಲ್ಲಿಸುತ್ತವೆ.

ಆತ್ಮಜ್ಞಾನಲಹರಿಯಲ್ಲಿರುವ ಎಲ್ಲ ಪದ್ಯಗಳು ಭಾರತೀಯ ಸಂಗೀತದ ರಾಗಗಳನ್ನು ಆಧರಿಸಿರುವದರಿಂದ ಗೇಯವಾಗಿದ್ದು ಕರ್ಣಮಧುರವಾಗಿವೆ. ಅನೇಕ ಪದ್ಯಗಳು ರಚನಾಕಾರರ ಸಮಕಾಲೀನ ಚಲನಚಿತ್ರದ ಹಾಡುಗಳ ಧಾಟಿಯನ್ನು ಆಧರಿಸಿದ್ದರಿಂದ ಅವೂ ಜನಪ್ರೀಯವೂ ಆಗಿದ್ದವು. ವೇದಾಂತಹದಂತಹ ಗಹನ ಶಾಸ್ತ್ರದ ವಿಷಯಗಳನ್ನು ಜನಸಾಮಾನ್ಯರಿಗೆ ತಿಳಿಸುವ ಈ ಪ್ರಯತ್ನ ಸ್ತುತ್ಯವಾದುದು ಮತ್ತು ಶ್ಲಾಘನೀಯವಾದುದು. ಶ್ರೀಮತಿ ನಾಗಮ್ಮ,

ಕೋಳಿವಾಡವ ಕೃಷ್ಣಕ್ಕ, ಶಲವಡಿ ಸದಾಶಿವ ಮತ್ತು ಜಯಲಕ್ಷ್ಮೀ ಇವರ ಪದ್ಯಗಳು ಸರಳವಾಗಿ ವಿಷಯವನ್ನು ಮಂಡಿಸುತ್ತವೆ. ಭಾಸ್ಕರನ ಕಿರಣಗಳು ಹಿಮವನ್ನು ಕರಗಿಸುವಂತೆ ಶ್ರೀ ಶಂಕರ ಭಟ್ಟರ ಪದ್ಯಗಳು ಓದುಗರ ಅಜ್ಞಾನವನ್ನು ನಾಶಮಾಡುತ್ತವೆ. ಹಿಮಕರನ ಕಿರಣಗಳು ಸಂತಾಪವನ್ನು ನಿವಾರಿಸುವಂತೆ ಶ್ರೀ ದೇವರಾಯರ ಪದ್ಯಗಳು ತಾಪತ್ರಯಗಳ ತಾಪವನ್ನು ನಿವಾರಿಸಿ ಮನವು ಭಗವಂತನಲ್ಲಿ ನಿಲ್ಲುವಂತೆ ಮಾಡುತ್ತವೆ. ಅಗ್ನಿಹೋತ್ರಿಯವರ ಗೀತೆಗಳಲ್ಲಿ ಜ್ಞಾನದ ಸೆಲೆ ಕಂಡರೆ ಕುಲಕರ್ಣಿಯವರ ಗೀತೆಗಳಲ್ಲಿ ಭಕ್ತಿಯ ನೆಲೆ ಕಾಣುತ್ತದೆ. ಉಳಿದವರ ಪದ್ಯಗಳಲ್ಲಿ ವೈರಾಗ್ಯ ತೋರುತ್ತದೆ. ಈ ರೀತಿಯಾಗಿ ಆತ್ಮಜ್ಞಾನಕ್ಕೆ ಅಗತ್ಯವಾಗಿರುವ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಈ ಗೀತ ಸಂಗ್ರಹವು ಒಡಗೂಡಿದ್ದು ಆತ್ಮಜ್ಞಾನಲಹರಿ ಎಂಬ ಹೆಸರನ್ನು ಸಾರ್ಥಕ ಮಾಡಿಕೊಂಡಿದೆ. ಈ ಲಹರಿಯನ್ನು ಓದಿ, ಅರ್ಥೈಸಿಕೊಂಡು, ಆ ಮಾರ್ಗದಲ್ಲಿ ನಡೆದು ಆತ್ಮಜ್ಞಾನ ಮಾಡಿಕೊಂಡಾಗಲೇ ಪದ್ಯರಚನಾಕಾರರ, ಓದುಗರ ಜೀವನ ಸಾರ್ಥಕವಾಗುವದು. ಓಂ ತತ್ಸತ್.

**ಡಾ.ವಿ.ಕೆ. ಹಂಪಿಹೊಳಿ**
**ಆಶೀರ್ವಾದ, ಹೆಗಡೆ**
೫೮೧೩೩೦

ಮನ್ಮಥ ಸಂವತ್ಸರ
ಗಣೇಶ ಚತುರ್ಥಿ(೧೭-೯-೨೦೧೫)

# ಅನುಕ್ರಮಣಿಕೆ

## ೧

(ಚಾಲ – ಎಂದೋ ಎಂದೋ ಎಂದೋ ಎಂಬಂತೆ)

ವಂದೇ ವಂದೇ ವಂದೇ ನಾರಾಯಣ ಗುರುದೇವಾ ।
ವಂದೇ ವಂದೇ ವಂದೇ ॥ ಪ ॥

ಪರಿಪೂರ್ಣ ಬ್ರಹ್ಮರೂಪ । ಪರಮಾತ್ಮ ಜ್ಞಾನದೀಪ ।
ನೀ ಬೆಳಗಿ ಭವದ ತಾಪ । ಪರಿಹರಿಪ ಜ್ಞಾನಿ ಭೂಪ ।
ಶಿರವಿಡುವೆ ಚರಣಯುಗದೀ । ಗುರುದೇವ ಎನ್ನ ಮನದಿ ।
ಪರತತ್ವ ತಿಳಿವ ತೆರದಿ । ಕರುಣಿಪುದು ನೀನೆ ಮುದದಿ ॥ ೧ ॥

ಜಾಗರಣ ಕನಸು ನಿದ್ರಾ । ಆಗುಗಳನರಿಯುತಿರ್ದಾ ।
ಈ ಗತಿಗಳೆಲ್ಲ ಮೀರ್ದಾ । ಆ ಘನವೆ ನಿರ್ವಿಕಲ್ಪ ।
ಅದೇ ನೀನು ಎಂದು ಪೇಳ್ದೀ । ಇದು ಎಲ್ಲ ಮಿಥ್ಯವೆಂದಿ ।
ಇದೊ ಮರಣಭಯವ ಕಳೆದಿ । ನಿಜಬೋಧವಚನಬಲದಿ ॥ ೨ ॥

ಮರೆದಿರ್ದ ತತ್ವವಿದನು । ಪರತತ್ವ ಶೋಧಕರನು ।
ಬೋಧಿಸುತ ನೀ ನಿಜವನು । ತೋರಿಸುತ ಕಾಯುವವನು ।
ವರಜ್ಞಾನ ಜಗದಲೆಲ್ಲಾ । ಮೆರೆದಾಡಿ ತಮವನೆಲ್ಲಾ ।
ಪರಿಹರಿಸಲೆಂದು ನೀನೇ । ಗುರುಶಂಕರನಿಗೆ ಪೇಳ್ದೀ ॥ ೩ ॥

**– ದೇವ**

**ರಾ. ಯಮನ** **ತಾ. ತ್ರಿವಟಿ**

## ೨

(ಚಾಲ – ಚಂದಾ ದೇಶ ಪಿಯಾಕೇ ಜಾ ಎಂಬಂತೆ)

ವಂದೇ ಶಂಕರ ಗುರುದೇವಾ ।
ವಂದೇ ಶಂಕರ ಗುರುದೇವಾ ॥ ಪ ॥

ಪಾವನಚರಣಾ । ತೋರ್ಯೆ ಕರುಣಾ ।
ಜ್ಞಾನಾಂಬುಧಿ ಪೂರ್ಣಾ ॥ ವಂದೇ ॥ ೧ ॥

ನಿತ್ಯ ನಿರಂಜನ ಸತ್ಯಸ್ವರೂಪಾ ।
ಪ್ರತ್ಯಗಾತ್ಮನೇ ಆನಂದರೂಪಾ ।
ನೀಡ್ವೆ ಘನಜ್ಞಾನಾ ಬೋಧಾ ।
ಬೇಡುವೆ ನಿನ್ನೊಳ್ ಗುರುವೇ ॥ ವಂದೇ ॥ ೨ ॥

ಆತ್ಮಸ್ವರೂಪವ ಬೋಧಿಸಿ ಎನ್ನ ।
ಮುಕ್ತ ಮಾಡು ನೀ ಶ್ರೀಗುರುದೇವಾ ।
ನಾರಾಯಣಪದದಾ ಜ್ಞಾನಾ ।
ಸಾರಿದ ಶಂಕರ ಗುರುವೇ ॥ ವಂದೇ ॥ ೩ ॥

– ದೇವ

## ೩

(ಚಾಲ – ಬಾ ಭ್ರಮರಾ ಪರಾಗವಿರೇ ಎಂಬಂತೆ)

ವಚನ – ಪೂರ್ಣಬ್ರಹ್ಮ ನೀ । ತುಂಬಿರುವಿ ಜಗವೆಲ್ಲ ।
ಪ್ರಣವರೂಪನು ನೀ । ವಿರತಿಜ್ಞಾನಗಳಾ ।
ಕೊಡು ಗುರುವೇ । ನಮಿಸುವೆ ನಾ ॥

ಶ್ರೀಗುರುವೇ । ಮಹಾಮಹಿಮಾ । ಪೂರ್ಣಾತ್ಮಸುಖಧಾಮಾ ।
ಬಾಗಿ ನಮಿಪೆ ಪ್ರಶಾಂತಕಾಮಾ । ಬೇಗ ನೀ ಬೋಧಿಸೈ ॥ ಪ ॥

ಅನುಭಾವಪೂರ್ಣ ಜ್ಞಾನದಾ । ದಾರಿಯಾ ತೋರು ನೀ ।
ದಯೆದೋರು ಜ್ಞಾನನಿಧಿಯೇ । ವಂದಿಪೆ ಬೋಧಿಸೈ ॥ ೧ ॥

ಸಂಸಾರ ಘೋರವಾರಿಧಿ । ದಾಂಟಿಪಾ ಧೀರ ನೀ ।
ನಿಜರೂಪನಿಷ್ಠ ವಿಭುವೇ । ವಂದಿಪೆ ಬೋಧಿಸೈ ॥ ೨ ॥

ಗುರುಸಾರ್ವಭೌಮ । ನಿನ್ನ ಈ ಪಾದವಾ ನಂಬಿದೆ ।
ಗುರು ಶಂಕರಾರ್ಯ ದೇವಾ । ವಂದಿಪೆ ಬೋಧಿಸೈ ॥ ೩ ॥

– ದೇವ

## ೪

(ಚಾಲ – ಪಿಯಾ ಮಿಲನಕೋ ಜಾನಾ ಎಂಬಂತೆ)

ಪರಾನಂದಪರಿಪೂರ್ಣಾ । ನೀಽಽ
ಗುರುವರಾ ಜ್ಞಾನದಾತಾ
ಮಾನಿತಾಽಽ ನೀಽಽ ॥ ಪ ॥

ದೇಹಾದಿಸಂಘಾತವಾ । ಮೀರಿರ್ದ ಸ್ವರೂಪವಾ ।
ಮಹಾಗೂಢವಾ ಬೋಧಿಸೀ ।
ಮುಕುತಿ ನೀಡುತಿರುವಾ । ನೀಽಽ ॥ ೧ ॥

ಸ್ವರೂಪಜ್ಞಾನಾ । ಮಹಾಸಾಧನಾ ।
ಪೇಳಿದ ನೀನೇ । ದಯಾಘನಾ । ಮಾನಿತನೇಽಽ ॥ ೨ ॥

ಪರಾತ್ಪರಾ ನಿರಾಮಯಾ ।
ನೀನೇ ಸ್ವರೂಪಾತ್ಮನೈ ॥
ನೀನೇ ನಾನಾದೆ ದೇವಾ ।
ಗುರುವೇ ಶಂಕರಾರ್ಯ । ॥ ೩ ॥

**– ದೇವ**

## ೫

(ಚಾಲ – ಅಬ ತೇರೆ ಶಿವಾ ಎಂಬಂತೆ)

ನೀನೇ ಭವಾಬ್ಧಿ ದಾಂಟಿಸಿದಿ ಸದ್ಗುರುನಾಥಾ ।
ನೀನೇ ಸ್ವರೂಪಾವಬೋಧ ನೀಡಿದಿ ತಾತಾ ॥ ಪ ॥

ಜ್ಞಾನಾಸಿಯಿಂದ ಕಡಿದೈ ಸಂಸಾರಪಾಶವ ।
ನಾನಾತ್ವವಳಿದು ಕಳೆದೈ ಅಜ್ಞಾನದೋಷವಾ ॥
ನಾನೆನ್ನ ರೂಪ ತಿಳಿದೆ ಪ್ರಭೋ ಶ್ರೀಗುರುದೇವಾ ।
ನಾನೇಂ ಪೇಳ್ವೆ ನಿನ್ನ ದಿವ್ಯಬೋಧಪ್ರಭಾವಾ ॥ ೧ ॥

ಈ ವಿಶ್ವವೆಲ್ಲ ಕನಸಿನಂತೆ ಎನಗೆ ತೋರ್ಪುದೈ ।
ಆವಾಗ ಬೋಧವಾಯ್ತು ನಾನರಿತೆ ಸತ್ಯವಾ ॥
ನಾವೀರ್ವರೆಂಬ ಭಾವವಡಗಿ ಸೇರಿದೆ ನಿನ್ನೊಳ್ ।
ಈ ವಾಣಿಯಿತ್ತು ಸಲುಹಿದ ಶ್ರೀ ಶಂಕರಗುರುವೆ ॥ ೨ ॥

**– ದೇವ**

**ರಾ. ಭೈರವಿ** **ತಾ. ತ್ರಿವಟ**

೬

(ಚಾಲ – ಧೀರೆ ಧೀರೆ ಅರೆ ಬಾದಲ ಧೀರೆ ಎಂಬಂತೆ)

ನಮಿಪೇ ನಮಿಪೇ । ನಮಿಪೇ । ಶ್ರೀಗುರುದೇವಾ ।
ನಮಿಪೆ ನಾ । ಅಮಿತವಾದ ಜ್ಞಾನಬೋಧಾ । ನೀಡಿದಾ ವಿಬುಧಾ ॥ ॥ ಪ ॥

ಜ್ಞಾನಬೋಧಾ ನೀಡಿ ಮನದಾ । ದೀನತನ ಬಿಡಿಸಿ ।
ನೀನೆ ಆ ಪರಮಾತ್ಮನೆನುವಾ । ಸ್ವಾನುಭವ ಹಿಡಿಸಿ ॥
ಹೀನವಿಷಯಾಸಕ್ತಿಯಾ । ನೀಗಿಸಿ ಎನಗಾಗಿ ।
ಅಮಿತವಾದಾ ಜ್ಞಾನಬೋಧಾ । ನೀಡಿದಾ ವಿಬುಧಾ ॥ ೧ ॥

ಜಗದಸುಖದ ಮರುಳುಬಿಡಿಸಿ । ಸೊಗಸ ತೋರಿಸಿದಿ ।
ಅಘವನಳಿದು ಸೊಗಸಿನೊಳಗೆ । ಬಗೆಯ ನಿಲಿಸಿದಿ ನೀ ।
ಬಗೆಯ ರೋಗವೆಲ್ಲವ । ನೀಗಿಸಿ ಎನಗಾಗಿ ।
ಬಗೆಬಗೆಯಲಿ ಬೋಧಿಸಿದ ಶ್ರೀಶಂಕರಾರ್ಯನೇ ನಾ ॥ ೨ ॥

**– ದೇವ**

**ರಾ. ಪಹಾಡಿ** ೭ **ತಾ. ಕವಾಲಿ**

ಚಿರಶಾಂತಿಪ್ರದಾತಾ ಗುರುವರಾ ।
ಪರಮಾರ್ಥಪ್ರಬೋಧಾ ಸುಖಕರಾ ॥ ಪ ॥

ಭವವಿತರಣಾ । ದಿವ್ಯಚರಣಾ ।
ಅಮಿತಕರುಣಾ । ಜ್ಞಾನಭರಣಾ । ॥ ಅ.ಪ. ॥

ಮೋಹಜಾಲದ ತಿಮಿರ ಮುಸುಕಿರೆ ।
ಸೋಹಮೆನಿಪ । ಜ್ಞಾನಸೂರ್ಯ ।
ಉದಿಸಿ ನೀ ಘನಸ್ವಾತ್ಮರಂಜನಾ ॥ ೧ ॥

ಶ್ರುತಿಶಿರಗಳಿಗೂ ಪೇಳಲಾಗದೆ ।
ನೇತಿ ಎನ್ನುತ ಮೌನವ ಧರಿಸಿದ ।
ಆತ್ಮತತ್ವವ ಪೇಳ್ದ ಧೀರನೇ ॥ ೨ ॥

ಭವಶರಧಿಯಲಿ ನಾವಿಕ ನೀನೇ ।
ಸಾವಕಾಶದಿ ದಾಂಟಿಸುತಿರುವೀ ।
ನಮಿಪೆ ನಾ ಗುರುದೇವ ಶಂಕರಾ ॥ ೩ ॥

**– ದೇವ**

ರಾ. ಸಾರಂಗ ತಾ. ದೀಪಚಂದಿ

೮

ನಮಿಪೆ ಸದ್ಗುರುರಾಯಾ ।
ಆ ನಿನ್ನ ದಯದಿ ಪುನೀತವಾದುದು ಕಾಯಾ ।
ಅರಿವಾಯ್ತು ಎನ್ನ ಸ್ವರೂಪದನುಭವ ಜೀಯಾ ।
ದೂರಾಯ್ತು ಮಾಯಾ ।

ಘೋರಕರ್ಮವ ನೀಗಿದೆನು ನಾ ।
ಪಾರಮಾರ್ಥಿಕ ಸತ್ಯವರಿಯುತ ।
ಮೀರಿದಾನಂದದಲಿ ಮುಳುಗುತ ।
ಸೇರಿ ಒಂದಾಗಿಹೆನು ನಿನ್ನೊಳು ॥ ೧ ॥

ಸರಸ ನಿನ್ನಯ ಬೋಧಾ ।
ಈ ಮರುಳು ಮಾನವರೇನು ಬಲ್ಲರು ಮೋದ ।
ಮಾಡೆನಲು ಬೇಗನೇ ಸಚ್ಚಿದಾತ್ಮನ ಶೋಧಾ ।
ತೋರುವರು ಕ್ರೋಧಾ ॥

ಮರುಳುಮತಿಗಳು ಅರಿದರೆಂತೋ ।
ಪರಮತತ್ವವ ವರವಿಚಾರದಿ ॥
ದುರುಳರಾ ಮಾತೇಕೆ ನಿನ್ನಯ ।
ಕರುಣೆಯಿಂದಲಿ ಪಾರುಗಂಡೆನು ॥ ೨ ॥

ಎಂತು ಪೊಗಳಲಿ ನಿನ್ನಾ ।
ಮನವಾಣಿಗಳಿಗೆ ಅನಂತನಾಗಿಹೆ ಘನ್ನ– ।
ಪದ ಪರಮಪಾವನ ನಿನ್ನ ನೆನೆದೊಡೆ ಬನ್ನಾ ।
ದೂರಾದುದೆನ್ನಾ ॥

ನಿತ್ಯ ನಿರ್ಮಲ ನಿರವಯವ ನೀ ।
ಸತ್ಯವಸ್ತುವು ಜಗವಿದೆಲ್ಲವು ॥
ಮಿಥ್ಯವಿದು ಪರಮಾತ್ಮ ನೀನೇ ।
ಸತ್ಯ ನಾನೇ ನೀನು ಶಂಕರ ॥ ೩ ॥

– ದೇವ

# ೯

(ಚಾಲ – ತಮನ್ನಾ ಲೇಕೆ ಆಯಾಹು ಎಂಬಂತೆ)

ನಮೋ ಶ್ರೀ ಸಚ್ಚಿದಾನಂದಾ ।
ಪರಾತ್ಮಾ ಶ್ರೀ ಶಿವಾನಂದಾ ।
ನಮಿಸುವೇ ಪೂರ್ಣ ವಿಜಿತಾತ್ಮಾ ।
ಮಹಾತ್ಮಾ ಸತ್ಯ ಸರ್ವಾತ್ಮಾ ॥ ಪ ॥

ಸ್ವರೂಪಾನಂದವಾ ಪಡೆವಾ ।
ಸನ್ಮತಿಯಾ ನೀಡು ಗುರುದೇವಾ ।
ಚರಣಕೆ ಎರಗುವೆನು ದೇವಾ ॥ ೧ ॥

ಸದಾನಂದಾ ಮನೋದೂರಾ ।
ಹೃದಯದಾವಾಸ ನಿಜಸಾರಾ ।
ಗುರುವರಾ ಶಂಕರಸ್ವರೂಪಾ ।
ಕರುಣಿಸೈ ಬೋಧದಾನಂದಾ ।
ಪರಾತ್ಮಾ ಶ್ರೀ ಶಿವಾನಂದಾ ॥ ೨ ॥

**– ದೇವ**

**ರಾ. ಬಾಗೇಶ್ರೀ** **ತಾ. ದಾದರಾ**

# ೧೦

(ಚಾಲ – ಜಾಗ ದರ್ದೆ ಇಶ್ಕ ಜಾಗ ಎಂಬಂತೆ)

ಜ್ಞಾನಿ ಗುರುವೆ ನೀಡು ವರವ । ಸಾನುರಾಗದಿಂದ ನಮಿಪೆ ।
ದೀನಬಂಧು ಕರುಣಿಸೀಗ ॥ ಪ ॥

ನನ್ನ ನಾನು ತಿಳಿಯದೇ । ಬಳಲುತಿರುವೆ ಸಂತತಾ ।
ಅರಿಯದಾದೆ ನಿನ್ನ ನಾ । ತೊರೆಯದಾದೆ ನನ್ನ ನಾ ।
ಬೇಡಿಕೊಂಬೆ ಬಾಗಿ ನಿನ್ನ ॥ ೧ ॥

ಕೀಳು ಸುಖವ ನಂಬಿ ನಾ । ಹೊರಟೆ ಅದನೆ ಅರಸುತಾ ।
ಎನಿತು ದೂರ ಪೋದರೂ । ದೊರೆಯದಾಯ್ತು ಆ ಸುಖಾ ।
ಆಶೆ ತೋರಿ ಮಾಯವಾಯ್ತು । ದೊರೆತ ಅಲ್ಪಸುಖವು ತಾ ।
ದಾರಿಗಾಣದಾದೆ ನಾನು ॥ ೨ ॥

ಐದೆ ನಿನ್ನ ಬಳಿಗೆ ನಾ । ಅಲೆದು ಬಳಲಿ ಬೆಂದೆ ನಾ
ಶರಣು ಬಂದೆ ನಿನ್ನನಾ । ಕ್ಷಮಿಸಿ ಪೊರೆ ದಯಾಘನಾ ।
ಶಿವಸ್ವರೂಪ ಶಂಕರಾರ್ಯ ॥ ೩ ॥

**– ಸದಾಶಿವ**

## ೧೧

(ಚಾಲ – ಮುರ್ಖೆ ಮತ್‌ಪೂಛ ಮೇರೀ ಇಶ್ಕಮೆ ಎಂಬಂತೆ)

ನಿಜಮುಕುತಿಯ ಪಥವಾ ತೋರಿಸಿ ಎನ್ನನು ಪೊರೆಯೈ ।
ಶರಣಾದೆನು ನಿನ್ನಡಿಗಳಲಿ ಗುರುವರನೇ ॥ ಪ ॥

ದಾಹ ಧಗಧಗಿಸುತಿದೆ ದೇಹದಿ ತಾ ಮನೆಮಾಡಿ ।
ತಾನೆ ತಾನಾಗಿಹುದೈ । ಆತ್ಮವ ತಾ ಮರೆಮಾಡಿ ॥ ೧ ॥

ಕೈದಿಯಾಗಿರುವೆನು ಭವ । ಬಂಧನದಲಿ ನಾ ಸಿಲುಕಿ ।
ಬಂದಿಹೆ ಶರಣಾಗಲು । ಭವತಾರಕ ನಿನ್ನನು ಹುಡುಕಿ ॥ ೨ ॥

ದರುಶನ ನೀಡಿ ಪ್ರಭೋ । ಓಡಿಸು ಎನ್ನಭಿಮಾನ ।
ಕರುಣಿಸಿ ಭೋಧಿಸು । ಶಿವಶಂಕರ ನೀ ಪರಿಪೂರ್ಣಾ ॥ ೩ ॥

**– ಸದಾಶಿವ**

**ರಾ. ಭೈರವಿ** **ತಾ. ಕವಾಲಿ**

## ೧೨

(ಚಾಲ – ಉಠೀ ಶಮಾ ಪರವಾನೇಕೇ ಲಿಯೇ ಎಂಬಂತೆ)

ನಮಿಸುವೆ ನಿನ್ನ ಶ್ರೀಗುರುವೆ ಅಮಿತಾನಂದಾತ್ಮ ಸ್ವರೂಪನೆ ।
ಶಮನ ಮಾಡು ಈ ಭವಬಾಧೆಯ ನೀ ।
ಚಿನುಮಯ ಮೂರುತಿಯೇ ॥ ಪ ॥

ಬೆಂದೆನು ಸುಖದುಃಖಗಳಲಿ ನಾ ।
ಬಹು ನೊಂದೆನು ಜನಿಮೃತಿ ಹೊಂದುತಾ ।
ಎಂದಿಗೆ ಪರಮಾನಂದವ ಪಡೆವೇ ।
ಬಂದೆನು ಶರಣಾಗಿ ॥ ಅ.ಪ. ॥

ಭೋಗದಿ ಸುಖಿಸುವೆನೆಂಬುವಾ । ಅನು–
ರಾಗದಿ ವಿಷಯಗಳಲಿ ಸಿಲುಕಿ ।
ಭೋಗಿಸಿದಂತೆಯೆ ವಾಸನಾ । ಬಲ–
ವಾಗುತ ಬಂದಿತು ಮನದಲ್ಲಿ ।

ಈ ಗತಿಯಲಿ ಸುಖ ಕಾಣದೆ । ಭವ–
ರೋಗದಿ ಬಳಲುವೆನೀಗಲೇ ।
ತ್ಯಾಗದಿ ನಿಜಸುಖ ದೊರಕುವ ರೀತಿಯ ।
ತಿಳುಹಿಸು ಗುರುವರನೆ ॥ ೧ ॥

ವಿಶ್ವದ ತೊಡಕನು ಹಾಕಿಕೊಂಡು ।
ಈಶ್ವರನನ್ನೇ ಮರೆತಿರುವೆ ।
ನಶ್ವರವಾಗಿಹ ಈ ಜಗವನು ।
ಶಾಶ್ವತವೆಂದೇ ತಿಳಿದಿರುವೆ ।

ಹಾಸ್ಯದ ಮಾತಿದು ಮಾನವಗೆ ।
ವಿಷಯೇಚ್ಛೆಯೆ ಜೀವನವೆಂಬುದು ।
ಶಾಶ್ವತ ಶಾಂತಿಯ ನೀಡುವ ನಿನ್ನಯ ।
ಪದವನೆ ಮರೆತಿಹುದು ॥ ೨ ॥

ಗುರುವೇ ಈಶ್ವರನೀತನೆಂದು ।
ಸಾರಿತು ಶ್ರುತಿ ಇದ ಕೇಳುತ ನಾ ।
ಕರುಣಾನಿಧಿಯೇ ನಿನ್ನ ಹೊರತಿ–
ನ್ನನ್ಯರು ಗತಿಯಿಲ್ಲೆನ್ನುತ ನಾ ।

ಚರಣಕಮಲಕೆ ಮೊರೆಹೊಕ್ಕೆ ।
ಪರಮಾನಂದಾತ್ಮಸ್ವರೂಪದಾ ।
ಅರಿವನು ನೀಡಿ ಪೊರೆವುದು ಎನ್ನ ।
ಶಂಕರ ಗುರುದೇವಾ ॥ ೩ ॥

**– ದೇವ**

## ೧೩

(ಚಾಲ – ಜಾಯೆ ತೊ ಜಾಯೆ ಕಹಾ ಎಂಬಂತೆ)

ದತ್ತ ದಿಗಂಬರನೇ ವಂದಿಪೆ ನಾ । ಕಾಯ್ವೈ ನೀ ।
ಕರುಣಾಸಾಗರ ವಲ್ಲಭರಾಯಾ ॥ ಪ ॥

ವಾಡೀವಾಸಾ ಹೇ ಜಗದೀಶಾ ।
ನೀಗಿಸು ಆಶಾ ಬೇಡುವೆ ಶ್ರೀಶಾ ।
ಚೈತನ್ಯಾಂಬುಧಿ ಆತ್ಮಸ್ವರೂಪಾ ॥ ೧ ॥

ವಿಷಯದೊಳಿರುವಾ ಈ ಘನಪ್ರೇಮಾ ।
ನಿನ್ನೊಳಗಿರಲೈ ನಿರ್ಗುಣಧಾಮಾ ।
ಸದ್ಗುರುನಾಥಾ ಹೇ ಅವಧೂತಾ ॥ ೨ ॥

ಸತ್ಯಸ್ವರೂಪಾ ನಿತ್ಯಾನಂದಾ ।
ಮಿಥ್ಯಾಕಲ್ಪನೇ ಈ ಜಗ ನಿನ್ನೊಳ್ ।
ಬ್ರಹ್ಮಾನಂದಾ ಶಂಕರರೂಪಾ ॥ ೩ ॥

**– ದೇವ**

**ರಾ. ತಿಲಂಗ** ## ೧೪ **ತಾ. ತ್ರಿವಟ**

ಶ್ರೀಶಿವಶಂಕರ ಬ್ರಹ್ಮಸ್ವರೂಪಾ ।
ಎರಗುವೆ ಚರಣಕೆ ಸದ್ಗುರುಭೂಪಾ ॥ ಪ ॥

ವೇದದ ಸಾರವ ತಿಳಿಸಿದಿ ನೀನು ।
ವಾದದ ಛಲವನು ಅಳಿಸಿದಿ ನೀನು ।
ಬೋಧಿಸಿ ಚಿತ್ತಕೆ ಶಾಂತಿ ನೀಡಿದೀ ॥ ೧ ॥

ಮಾಯಾಧೀಶನ ಮಂತ್ರವನೋದಿ ।
ಮಾಯಾಧೀನಗೆ ಯಂತ್ರವ ಬರೆದೀ ।
ಸಾಯದ ನೋಯದ ಮಾಟ ಮಾಡಿದೀ ॥ ೨ ॥

ತನುಕರಣಂಗಳು ನೀನಲ್ಲೆಂದು ।
ಗುಣಯುತಜೀವನು ನೀನಲ್ಲೆಂದು ।
ಚಿನುಮಯರೂಪನ ತೋರಿದಿಯಿಂದು ॥ ೩ ॥

ತೋರಿದಿ ಕರುಣದಿ ಮುಕ್ತಿಯ ದ್ವಾರಾ ।
ನಾರಾಯಣಪದಪಂಕಜಭ್ರಮರಾ ।
ಸಾರಿದಿ ತತ್ವವ ತಂದೆ ಶಂಕರಾ ॥ ೪ ॥

– **ಸದಾಶಿವ**

## ೧೫

(ಚಾಲ – ಓ ಅಸಮಾನವಾಲೇ ಎಂಬಂತೆ)

ಶ್ರೀಪಾದವಲ್ಲಭಾ ದೇವಾ । ಗುರುನಾಥಾ ದತ್ತರಾಜಾ ।
ವರಗಾಣಗಾಪುರಾಧೀಶಾ । ಅವಧೂತಾ ದತ್ತರಾಜಾ ।
ನರಸೋಬವಾಡಿವಾಸಾ ಶ್ರೀ । ಗುರುನಾಥಾ ದತ್ತರಾಜಾ ॥ ಪ ॥

ತ್ರಿಗುಣಾತ್ಮಕಾ ಘನಮಹಿಮಾ । ತ್ರಿಗುಣಾತೀತ ಭೂಮಾ ।
ಅಘನಾಶ ಪೂರ್ಣಕಾಮಾ । ಜಗದೀಶ ಸೌಖ್ಯಧಾಮಾ ।
ಬಗೆಹರಿಸೈ ಮೋಹಮಾಯಾ । ಭಗವಂತ ನೀ ಗುರುರಾಯಾ ॥ ೧ ॥

ವೈರಾಗ್ಯ ಶಾಂತಿ ಸುಖವಾ । ಪರಮಾರ್ಥಜ್ಞಾನದರಿವಾ ।
ಗುರುಪಾದಸೇವೆಗೈವಾ । ವರಭಾಗ್ಯ ನೀಡು ದೇವಾ ।
ಪರಿಹರಿಸೈ ವಿಷಯಚಿಂತಾ । ಪರಮಾತ್ಮ ಸದ್ಗುರುನಾಥಾ ॥ ೨ ॥

ಘನನಿರ್ವಿಕಲ್ಪರೂಪಾ । ನೀನೆನ್ನ ಸ್ವಾತ್ಮರೂಪಾ ।
ಮನವಾಣಿ ಮೀರ್ದ ರೂಪಾ । ಆನಂದ ಬ್ರಹ್ಮರೂಪಾ ।
ಕನಸೈ ಈ ಜಗವು ನಿನ್ನೊಳ್ । ಗುರುರಾಜ ಶಂಕರರೂಪಾ ॥ ೩ ॥

– **ದೇವ**

## ೧೬

(ಚಾಲ – ಚಂದನಕಿ ಪಲವಾ ಎಂಬಂತೆ)

ವಂದಿಪೆ ಗುರುವೆ । ನೀ ಕಲ್ಪತರುವೇ ।
ಬಂಧನ ಕಳೆಯುವ । ಭೋಧಾತ್ಮ ಗುರುವೆ ॥ ಪ ॥

ಅಗಣಿತಮಹಿಮಾ । ಜಗದಾಧಾರ ।
ಬಗೆಗೆ ನಿಲುಕದಿಹ । ಘನನಿರ್ವಿಕಲ್ಪ ॥ ೧ ॥

ಜ್ಞಾನಬೋಧನೆಗಾಗಿ । ಮಾನವ ರೂಪದಿ ।
ಸ್ವಾನುಭವವ ತೋರ್ಪ । ಮುಕುತಿದಾಯಕನೇ ॥ ೨ ॥

ಪರಮಾತ್ಮ ನೀನೆಂದು । ವರಶ್ರುತಿ ಪೇಳೆ
ಸರಿಯಾಗಿ ಬೋಧಿಸಿ । ಕರುಣೆದೋರುವನೇ ॥ ೩ ॥

ಜಗವೆಲ್ಲ ಪುಸಿಯೆಂದು । ಜಗಕೆಲ್ಲ ಪೇಳುವ ।
ಭಗವಂತ ದಯದೋರಿ । ಪೊರೆವುದು ದೇವಾ ॥ ೪ ॥

ಚಿನುಮಯರೂಪನೆ । ಸ್ವಾನಂದರೂಪಾ ।
ಮನವು ನಿನ್ನೊಳಗಿರಲಿ ಶಂಕರರೂಪಾ ॥ ೫ ॥

– ದೇವ

**ರಾ. ಯಮನ ಕಲ್ಯಾಣ** **ತಾ. ತ್ರಿವಟ**

## ೧೭

ಬಾಗಿ ನಾ ನಮಿಪೆ ಗುರುದೇವ ।
ಯೋಗಿರಾಜಾ ಪಾಲಿಸು ಮತಿಯಾ ।
ಶ್ರೀಗುರುವೆ ಪರಮಾತ್ಮರೂಪ ॥ ಪ ॥

ಜ್ಞಾನಬೋಧಕಾ ಮುಕುತಿಪ್ರದಾತಾ ।
ಸ್ವಾನುಭವಾನಂದಾಮೃತದಾತಾ ।
ಮಾನವಾಕೃತಿ ತಳೆದಖಿಳಾತ್ಮಾ ।
ಹೀನಭವದ ಭಯ ಬಿಡಿಸಿರುವಾತಾ ॥ ೧ ॥

ನಿತ್ಯ ನಿರಂಜನ ಸತ್ಯಸ್ವರೂಪ ।
ಭೃತ್ಯರ ಬೋಧಿಸಿ ಮುಕ್ತಿಯನೀವಾ ।
ಶ್ರೋತ್ರಿಯ ನೀ ಘನ ಬ್ರಹ್ಮನಿಷ್ಠಗುರು ।
ಮತಿಯನೆ ಪ್ರೇರಿಸು ಶ್ರೀಗುರುಶಂಕರ ॥ ೨ ॥

– ದೇವ

## ೧೮

(ಚಾಲ – ಆಪನೆ ಕಹೋ ತುಮಸೆ ಮೇರಿ ಸುನೊ ಎಂಬಂತೆ)

ವಂದಿಪೆ ನಾ ಭಗವನ್ ಪೂರ್ಣಘನಾ ।
ನೀ ಮುಕುತಿನಿದಾನಾ । ಜ್ಞಾನಘನಾ । ಆನಂದಘನಾ ॥ ಪ ॥

ನಿತ್ಯಾನಂದನು ನೀ ಚೈತನ್ಯ ।
ಮೂಲಪದ ಮಾಯಾರಹಿತ ಸದಾ ।
ಆ ನಿರ್ವಿಕಲ್ಪಾತ್ಮಾ ಸತ್ಯನು ನೀ ।
ಹೇ ಸರ್ವಾಂತರ್ಯಾಮೀ ಪ್ರೇಮಘನಾ । ಆನಂದ ॥ ೧ ॥

ಕಣ್ಣು ಮನಗಳಿಗೆ ನಿಲುಕದಲೇ ।
ನೀ ಸಾಕ್ಷಿಸ್ವರೂಪಾ ಇವುಗಳಿಗೇ ।
ಕಲ್ಪಿತವೈ ಮಾಯಾಮೋಹಿತವೈ ।
ಈ ಜಗವೆಲ್ಲಾ ನಿನ್ನೊಳ್ ಸತ್ಯಘನಾ । ಆನಂದ ॥ ೨ ॥

ಜೀವಜಡನಾಗಿ ನೀನೆಲ್ಲ ।
ಈ ಮೂಢರಿಗೆ ಕಾಂಬಿ ಇದು ಎಲ್ಲ ।
ಮಹಿಮೆ ಇದೈ । ನೀನೇ ಈಶ್ವರನೈ ।
ಹೇ ಜನ್ಮಾದಿರಹಿತಾ । ಜ್ಞಾನಘನಾ । ಆನಂದ ॥ ೩ ॥

ಎಂತು ಬಣ್ಣಿಸಲೈ ನಿನ್ನನು ನಾ ।
ಈ ವಾಣಿಯಿಂ ದೂರಾ ನಿಜಸಾರಾ ।
ಯೋಗಿವರಾ ಗುರು । ಶ್ರೀಶಂಕರಾ ।
ಹೇ ಸರ್ವಾತ್ಮಪೂರ್ಣಾನಂದಘನಾ । ಆನಂದ ॥ ೪ ॥

**– ದೇವ**

**ರಾ. ಮಿಶ್ರ ಪಹಾಡಿ** ## ೧೯ **ತಾ. ತ್ರಿವಟ**

ನೋಡು ಸದ್ಗುರುನಾಥನಾ ಶಂಕರನಾ ।
ನೋಡು ಸದ್ಗುರುವಿನ । ಕಾಡಿ ಬೇಡುವನಲ್ಲ ।
ನಾಡಿನೊಳಗೆ ಆರೂಢನೆಂದೆನಿಸಿದ ॥ ಪ ॥

ಬಂಧನ ಬಿಡಿಸಿದ । ಒಂದರೊಳ್ ನಿಲಿಸಿದ ।
ಕಂದನ ಕರುಣಿಸಿದಂಬಿಕೆತನಯನ ॥ ೧ ॥

ಘೋರಕರ್ಮಗಳಾ । ಬೇರು ಸುಡುತಲೆನ್ನ ।
ಪಾರುಮಾಡಿರುವಂಥ ಪಾರ್ವತಿರಮಣನ ॥ ೨ ॥

ಗಡನೆ ಬೋಧಿಸಿ ಎನ್ನ । ಗಡಿಬಿಡಿ ಬಿಡಿಸಿದ ।
ಗಡಗಡ ಬಂದು ನೀ ಗಣಪತಿಪಿತನಾ ॥ ೩ ॥

**– ಕೃಷ್ಣಕ್ಕ**

## ೨೦

(ಚಾಲ – ಜಿಂದಗೀ ದೇನೆವಾಲೆ ಸುನನಾ ಎಂಬಂತೆ)

ವಂದಿಪೆ ಬೋಧಿಸ್ಯೆ ಗುರುವರನೇ ।
ಘನವೇದಾಂತವಿದಿತಾತ್ಮನೇ ।
ಪರಮಾನಂದ ಪರಿಪೂರ್ಣನೇ ॥ ಪ ॥

ಇರುವಿಕೆಯಿಂದ ನೀ ಸದ್ರೂಪನೇ ।
ಅರಿವಿಕೆಯಿಂದ ನೀ ಚಿದ್ರೂಪನೇ ।
ಪರಪ್ರೇಮಾಸ್ಪದಾ ನೀ ಆನಂದನೇ ।
ಪರಮಾನಂದನೇ । ನೀ ಸರ್ವಾತ್ಮ ಪರಮಾತ್ಮನೇ ॥ ೧ ॥

ಮಾಯಾಂಧಕಾರಕ್ಕೆ ನೀ ಭಾಸ್ಕರಾ ।
ಘೋರಸಂಸಾರತಾಪಕ್ಕೆ ನೀ ಚಂದಿರಾ ।
ನೀ ಕರುಣಾಕರಾ । ಶ್ರೀಪರಮೇಶ್ವರಾ ।
ಮೃತ್ಯುಭೀತಿಹರಾ । ನಾ ಶರಣಾದೆ ಶಿವಶಂಕರಾ ॥ ೨ ॥

**– ಸದಾಶಿವ**

## ೨೧

(ಚಾಲ – ದೋಣಿ ಸಾಗಲಿ ಮುಂದೆ ಹೋಗಲಿ ಎಂಬಂತೆ)

ಕರುಣಮೂರ್ತಿಯೇ ಕಲ್ಪವೃಕ್ಷವೇ । ದೇವ ಸದ್ಗುರುನಾಥನೇ ।
ಸಚ್ಚರಿತ್ರನೆ ಸುಜನಪಾಲನೆ । ನಿನ್ನ ಭಜಿಸುವೆ ಭಕ್ತಿಯಿಂ ॥ ಪ ॥

ನೀನೆ ತಂದೆಯು ನೀನೆ ತಾಯಿಯು ।
ನೀನೆ ಎಮ್ಮಯ ಬಂಧುವು ।
ನೀನೆ ವಿದ್ಯೆಯು ನೀನೆ ಬುದ್ಧಿಯು ।
ನೀನೆ ಸಕಲವು ನಿರುತವು ॥ ೧ ॥

ಸಕಲಶ್ರೋತ್ರಿಯಶ್ರೇಷ್ಠನೆನಿಸುತ
ವಿಮಲಕೀರ್ತಿಯ ಪಡೆದಿಹೆ।
ಅಖಿಲಕರ್ನಾಟಕದಿ ನಿನ್ನನು।
ಸಕಲಜೀವರು ನೆನೆವರೈ ॥ ೨ ॥

ವೇದಮೂರ್ತಿಯೆ ಶಾಂತಮೂರ್ತಿಯೆ।
ನಿನ್ನ ಪಡೆದವರ್ ಧನ್ಯರೈ।
ಎಮ್ಮ ಭಾಗ್ಯಕೆ ಎಣೆಯದುಂಟೆ
ಹೇಳಲಸದಳವಾಗಿದೆ ॥ ೩ ॥

ನಮೋ ನಮೋ ಜ್ಞಾನೈಕನಿಷ್ಠನೆ।
ನಮೋ ನಮೋ ವೈರಾಗ್ಯನಿಷ್ಠನೆ।
ನಮೋ ನಮೋ ಸ್ವಾನಂದಮೂರ್ತಿಯೇ।
ನೀನೆ ರಕ್ಷಿಸು ಎಮ್ಮನು ॥ ೪ ॥

ಶಿವಸ್ವರೂಪನು ನೀನಿರುತಲೀ।
ಭುವನದೊಳಗವತರಿಸಿದೇ।
ಭವದ ರೋಗಕೆ ವೈದ್ಯ ನಿನಗೀ – !
ಕವನ ಮಾಲೆಯ ಹಾಕುವೆ ॥ ೫ ॥

ನಮೋ ನಮೋ ಘನಸತ್ತ್ವರೂಪನೆ
ನಮೋ ನಮೋ ನಿಜಚಿತ್ಪ್ರಕಾಶನೆ।
ನಮೋ ನಮೋ ಆನಂದಪೂರ್ಣನೆ।
ನಮೋ ನಮೋ ಗುರುಶಂಕರಾ ॥ ೬ ॥

– **ನಾಗಮ್ಮ**

## ೨೨

(ಚಾಲ – ತೂಜಲಿ ತೊಜಲಿ ಎಂಬಂತೆ)

ಬಾಗುವೆ ಶ್ರೀಗುರೋ।
ಸತ್ಯಸ್ವರೂಪಾ ॥ ಪ ॥

ಓ ಜ್ಞಾನಿಯೇ। ಪರಾತ್ಮರೂಪನೇ।
ನೀ ಬೋಧಿಸೈ। ನಮೋ ಮಹಾತ್ಮನೇ।
ಶರಣಾದೆ ಕರುಣಿಸು ನೀ। ಭವದಬಾಧೆ ನೀಗಿಸೈ ॥ ೧ ॥

ಈ ದರುಶನಾ । ಪಾದಾಭಿವಂದನಾ ।
ಈ ಸ್ಪರ್ಶನಾ । ಪುನೀತವೀಮನಾ ।
ಭಾಗ್ಯವಿದೇ ಜೀವನದೀ । ನಿನ್ನಂಥ ಗುರು ದೊರಕಿದಿ ॥ ೨ ॥

ಆನಂದದಾ । ಸುಬೋಧ ನೀಡುವಾ ।
ಈ ಬಂಧವಾ । ನಿವಾರಿಸುವ ಮಹಾ ।
ಬೋಧಾತ್ಮ ಶಂಕರಗುರು ॥ ೩ ॥

– ದೇವ

## ೨೩

(ಚಾಲ – ದಿಲಸೇ ಮಿಲಾನಾ ದಿಲ್ ಕಿ ಪ್ಯಾರ ಎಂಬಂತೆ)

ಬೋಧಿಸು ಗುರುವರನೇ । ಆತ್ಮರೂಪನೇ ।
ಬಾಧೆಯ ನೀಗಿಸು । ಬೋಧಾತ್ಮನೇ ॥ ಪ ॥

ಶಾಂತಿಯನೀವಾ । ಭ್ರಾಂತಿಯ ಕಳೆವಾ ।
ಏಕಾಂತಪೂರ್ಣ । ನಿರಾತಂಕವಾದ ।
ಚಿಂತೆದೂರಮಾಡುವಾ । ಅಂತರಾತ್ಮಜ್ಞಾನವಾ ।
ಸಂತೋಷದಿಂದಾ ತಿಳಿಸೈ ಮಹಾತ್ಮನೆ ॥ ೧ ॥

ಸದ್ಗುರುರಾಯಾ । ಕರುಣಿಸು ಜೀಯಾ
ಓಡಿಸು ಮಾಯಾ । ಮಹಾಮೋಹನಿಧಿಯಾ ।
ಜ್ಞಾನಬೋಧ ನೀಡುವಾ । ಸ್ವಾನುಭಾವ । ತೋರುವಾ ।
ಗುರುಶಂಕರಾಚಾರ್ಯಾ । ಕೃಪೆಮಾಡು । ಜೀಯಾ ॥ ೨ ॥

– ದೇವ

**ರಾ. ಮಿ. ಮಾಂಡ** **ತಾ. ತ್ರಿವಟ**

## ೨೪

ಆಶೀರ್ವದಿಸು ಗುರುರಾಜ ।
ನಾ ಶೀರ್ಷವನೆ ಬಾಗುತ ನಮಿಸುವೆ ॥ ಪ ॥

ಜ್ಞಾನದಾತಾ ಕರುಣಿಸು ತಾತಾ ।
ಆತ್ಮಾನುಭವಾ । ಪಡೆವ ವರವಾ ॥

ಜ್ಞಾನನಿಧಿಯೆ ಬೇಡುವೆ ನಿನ್ನೊಳ್ ।
ಮನದಿ ಜ್ಞಾನವು ಹೊಳೆಯುವತೆರನಾ– ॥ ೧ ॥

ದೇವನಾನೆಂದರಿವತೆರದಿ ।
ಜೀವಭಾವ ಮರೆವತೆರದಿ ॥
ಭಾವದಿ ನೀನೆ ನೆಲಿಸುವ ತೆರದಿ ।
ಸಾವಿನಂಜಿಕೆ ಸರಿಯುವತೆರನಾ– ॥ ೨ ॥

ಅನುಭವನಿಧಿಯೆ ಚಿನುಮಯರೂಪಾ ।
ಮನವುನಿನ್ನೊಳ್ ಮುಳುಗುವ ತೆರದಿ ॥
ಆ ನಾರಾಯಣಶಿಷ್ಯ ಶಿಖಾಮಣಿ ।
ಜ್ಞಾನಿಶಂಕರ ಗುರುರಾಜಾ ॥ ೩ ॥

**– ದೇವ**

**ರಾ. ಮಾಲಕಂಸ** **೨೫** **ತಾ. ಝಂಪಾ**

ಕ್ಷಮಿಸು ಅಪರಾಧಿಯನು ಅಮಿತಕರುಣಾಳುವೇ ।
ಸಮನಾದ ನಿನ್ನೊಳಗೆ ವಿಷಮತೆಯ ಮಾಳ್ಪೆನ್ನ ॥ ಪ ॥

ಪರಮಾತ್ಮ ನೀನೆಂಬ ಪರತತ್ವ ತಿಳುಹಿಸಿ ।
ಪರಮಶಾಂತಿಯನೀವ ಗುರುವಿನಾನುಡಿಯಾ ॥
ಪರಿಕಿಸದೆ ಭೇದದಲಿ ಮರೆತು ನಿನ್ನಯ ಚರಣ ।
ಗರುವದಲಿ ನಾ ಚರಿಸಿ ದುರುಳನೆನಿಸಿದ ಎನ್ನ ॥ ೧ ॥

ನಿನ್ನ ಬೋಧವ ಕೇಳ್ದು ನಿನ್ನಿಂದಲೇ ತಿಳಿದು ।
ಎನ್ನ ಮುಕುತಿಯ ದೇವ ನಿನ್ನನೇ ಮರೆತೆ ॥
ಅನ್ಯವಿಷಯವ ನೆಚ್ಚಿ ಬನ್ನಬಡುತಿರುವೆನ್ನ ।
ಬಿನ್ನಹವ ಮನ್ನಿಸುತ ಕ್ಷಮಿಸು ಗುರುವೆ ॥ ೨ ॥

ಅಪರಾಧಿ ನಾನೆಂದು ಉಸುರದಂತಾಯಿತ್ತೈ ।
ಕಪಟವಿಲ್ಲದೆ ಪೇಳ್ದಿ ನೀನೆ ನಾನೆಂದು ॥
ಕುಪಿತನಾಗಲುಬೇಡ ಎನ್ನೊಳಗೆ ಗುರುದೇವಾ ।
ಕೃಪೆಮಾಡಿ ಕ್ಷಮಿಸಯ್ಯಾ ಗುರುಶಂಕರಾರ್ಯ ॥ ೩ ॥

**– ದೇವ**

## ೨೬

(ಚಾಲ – ಯೇ ಚಾಂದ ಭುಪನಾ ಜಾನಾ ಎಂಬಂತೆ)

ನಾ ಮಾಳ್ಪೆ ನಿನ್ನಾಗಾನಾ । ಪರಿಪೂರ್ಣಾ ಸತ್ಯಜ್ಞಾನಾ ।
ಗುರುಮೂರ್ತಿ ಎನಗೆ ದಾನಾ । ನೀಡಿದೆ ನೀ ದಿವ್ಯಜ್ಞಾನಾ ॥ ಪ ॥

ಅವಿಚಾರದಿಂದ ತೊಳಲಿ । ಭವಬಾಧೆಯಿಂದ ಬಳಲಿ ।
ಕಿವಿಗೊಡದೆ ನಿನ್ನ ನುಡಿಗೆ ಭವನದಲಿ ದುಃಖಿಯಾದೆ ।
ಶಿವ ನೀನೆ ಎಂದು ಪೇಳಿ । ಸವನಿಸಿದೆ ಮೋಕ್ಷಪದವಾ ॥ ೧ ॥

ಏನೆಂದು ಪಾಡಲಯ್ಯಾ । ನಾನೆಂಬ ಭಾವವಡಗಿ ।
ನೀ ನಾನೆ ಎಂಬ ತಿಳಿವು । ಘನವಾಗಿನೆಲಿಸಿತೀಗ ।
ಏನೊಂದು ತೋರದಯ್ಯಾ । ನಾನಾತ್ವವೆಂಬ ಭಾವ ॥ ೨ ॥

ಈ ಸೋಹಮೆಂಬ ಪದವ । ಲೇಸಾಗಿ ಬೋಧಿಸಿದ ನೀ ।
ಆಶಾಪಿಪಾಸೆ ನೀಗಿ । ನಾ ಶಾಂತನಾದೆ ಮನದಿ ।
ನೀ ಸಚ್ಚಿದಾತ್ಮಗುರುವೇ । ಶಂಕರನೆ ಕಲ್ಪತರುವೆ ॥ ೩ ॥

**– ದೇವ**

**ರಾ. ಭೈರವಿ** **೨೭** **ತಾ. ದಾದರಾ**

(ಚಾಲ – ತೂSSS ಪಾಸ ಆ ರಹಾ ಹೈ ಎಂಬಂತೆ)

ನೀ ನೀಡು ವರವ ದೇವಾ । ಭವಜಾಲಕಾರಣಾದ ।
ಈ ವಾಸನಾಪಿಶಾಚಾ । ಬಿಡುವಂತೆ ಕರುಣಿಸೀಗ ॥ ಪ ॥

ವಿಷಯೇಚ್ಛೆಯಿಂದ ಬಳಲಿ । ವಿಷಯಗಳ ಭೋಗಪಡೆದೆ ।
ಪುಸಿಯಾದ ವಿಷಯಸುಖದ । ವ್ಯಸನದಲ್ಲಿ ಬೆಂದುಹೋದೆ ।
ವಿಷಯೇಚ್ಛೆ ಹೋಗಲಿಲ್ಲ । ಕಸವಿಸಿಯ ಬಡುತಲಿರುವೆ ।
ಹಸನಾಗಿ ಬೋಧಮಾಡೈ ॥ ೧ ॥

ಘೋರಾದ ಭವಜಲಧಿಯಾ । ಪಾರಾಗುವುದೆ ಯುಕುತಿಯಾ ।
ಚಿರಶಾಂತಿ ಪಡೆವ ಪರಿಯಾ । ಪರಮಾತ್ಮಜ್ಞಾನಸಿರಿಯಾ ।
ಕರುಣಿಪುದು ಶಂಕರಾರ್ಯ । ಶರಣಾದೆ ಜ್ಞಾನಿವರ್ಯಾ ॥ ೨ ॥

**– ದೇವ**

## ೨೮

(ಚಾಲ – ಹೈ ಎ ವಹಿ ಅಸಮಾನ್ ಎಂಬಂತೆ)

ಬೇಡುವೆ ನಾ ಯಾದವಾ । ಖೋಡಿ ಮನದ ಮೋಹವಾ ।
ಓಡಿಸುತಲಿ ಮಾಧವಾ । ನಿನ್ನ ಸೇರಿಕೊಂಬುವಾ ।
ನೀಡು ಇನಿತು ಭಾಗ್ಯವಾ ॥ ಪ ॥

ನಾನು ಇದುವೆ ನನ್ನದು । ಮಾನವಗಿದು ಪಾಶವು ।
ದೀನಬಂಧು ಇದನು ನೀ । ಮಾಣದೆ ಬಿಡಿಸೈ ಪ್ರಭೋ ।
ಬೇಡಿಕೊಂಬೆ ಹೇ ವಿಭೋ । ನೀನೆ ಪರಮಸದ್ಗುರು ॥ ೧ ॥

ಹೃದಯದಲ್ಲಿ ನೆಲೆಸಿದಾ । ಆತ್ಮರೂಪನನು ಸದಾ ।
ಮುದದಿ ತಿಳಿಯುವಂತೆ ನೀ । ಸನ್ಮತಿ ದಯಪಾಲಿಸೈ ।
ಸದಮಲಾತ್ಮಶಂಕರಾ । ಬೇಡುವೆ ನಿನಗೀಶ್ವರಾ ॥ ೨ ॥

– **ದೇವ**

## ೨೯

(ಚಾಲ – ಮರನಾ ತೇರಿ ಗಲೀಮೆ ಎಂಬಂತೆ)

ಪರಮಾತ್ಮ ದಿವ್ಯಚರಣಾ । ಭಜಿಸುವೆವು ಜ್ಞಾನಪೂರ್ಣ ।
ನೀ ತೋರ್ಪುದಯ್ಯ । ಕರುಣಾ ॥ ಪ ॥

ಸಂಸಾರ ತಾಪ ಹರಣಾ ।
ಆನಂದ ರೂಪ ತಾಣಾ । ನಾರಾಯಣಾತ್ಮಪೂರ್ಣಾ ॥ ಅ.ಪ. ॥

ನಿನ್ನಿರವೇ ಜಗವಿದೆಲ್ಲ । ನಿನ್ನರಿವೇ ಜೀವರೆಲ್ಲಾ ।
ನಿನ್ನಿಂದೆ ಸುಖವಿದೆಲ್ಲ । ನೀನೇ ಇದೆಲ್ಲ ದೇವಾ ।
ನೀ ಸತ್ಯ ನಿರ್ವಿಕಾರಾ । ನೀನಾತ್ಮರೂಪಸಾರಾ ।
ನೀ ಪರಮಮೋಕ್ಷತಾಣಾ ॥ ೧ ॥

ಮರೆತಿರಲು ಜೀವ ನಿನ್ನ । ದೊರೆಯುವುದೆ ಶಾಂತಿಯಿನ್ನ ।
ಪರಿತಾಪಬಡುತ ಮುನ್ನಾ । ತಿರುಗುವನೊ ಜನ್ಮ ಜನ್ಮ
ಗುರುಶಂಕರಾರ್ಯ ನಿನ್ನ । ಶರಣಹುದೆ ಶಾಂತಿತಾಣ ।
ನೀ ಸರ್ವರಾತ್ಮಪೂರ್ಣ ॥ ೨ ॥

– **ದೇವ**

## ೩೦

(ಚಾಲ – ಭಮ್ ಭಮ್ ಭಮ್ ಬಾಜೆ ಎಂಬಂತೆ)

ಬಾ ಬಾ ಬಾ ಗುರು ದತ್ತಾತ್ರಯಾ । ನೀ ಕರುಣಾಮಯಾ ।
ನೀ ತೋರ್ರೈ ದಯಾ । ಬಾ ಬಾ ಬಾ ಗುರುದತ್ತಾ ॥ ಪ ॥

ಅನಸೂಯಾಸತಿತನಯಾ । ಪರಿಹರಿಸೆನ್ನಯ ಮಾಯಾ ।
ಎರಗುವೆ ಚರಣಕೆ ಜೀಯಾ । ಕರುಣಿಸು ನೀ ಗುರುರಾಯಾ ।
ಈss ಭವಾ । ಈ ಭವಾಬ್ಧಿದಾಂಟಿಸು ।
ಕೈವಲ್ಯ ತೋರಿಸು ದತ್ತಾತ್ರಯಾ ॥ ೧ ॥

ಬಾಳಿನ ಭ್ರಮೆಯನು ಬಿಡಿಸಿ । ಪಾಲಿಸು ಹೃದಯ ನಿವಾಸಿ ।
ನಿನ್ನ ಸ್ವರೂಪವ ತಿಳಿಸಿ । ಬೋಧಿಸು ಕುರುಪುರವಾಸಿ ।
ಶ್ರೀss ಗುರೋ । ಶ್ರೀ ಗುರೋ ನಮಿಸುವೆನು ।
ಪ್ರಭೋ ದಯಾಮಯ । ದತ್ತಾತ್ರಯಾ ॥ ೨ ॥

ಚಿನುಮಯರೂಪನು ನೀನು । ಚಿರನದ್ವೈತನು ನೀನು ।
ನೀಡೈ ಚಿತ್ತಕೆ ಶಾಂತಿ । ನೀಗಿಸು ಎನ್ನಯ ಭ್ರಾಂತಿ ।
ನೀss ಗುರೋ । ನೀ ಗುರೋ ಶ್ರೀಶಂಕರ ।
ಆನಂದಸಾಗರ । ದತ್ತಾತ್ರಯಾ ॥ ೩ ॥

**– ದೇವ**

## ೩೧

**ರಾ. ಜಯಜಯವಂತಿ** **ತಾ. ದಾದರಾ**

ನೋಡು ಸದ್ಗುರುನಾಥನಾ ।
ಕೊಂಡಾಡು ಅವನ ಕೀರ್ತನಾ ॥ ಪ ॥

ಮಾಡು ಶ್ರವಣ ಮನನವಾ । ದೂಡು ಭವದ ಬಂಧವಾ ॥ ಅ.ಪ. ॥

ಗುರುವೆ ಮಾಯೆಗಾಧಾರ । ಗುರುವೆ ಗುರುದಿಗಂಬರಾ ॥
ಗುರುವೆ ಗೋದಾವರಿ । ಗುರುವೆ ತ್ರ್ಯಂಬಕೇಶ್ವರಾ ॥ ೧ ॥

ಸಾಧನಾ ಪ್ರಯಾಗದಿ । ಬೋಧ ತ್ರಿವೇಣಿಸಂಗಮ ॥
ಶ್ರವಣ ಸ್ನಾನ ವೇಣಿದಾನ । ಮನನ ಮರದಬಾಗಿಣಾ ॥ ೨ ॥

ತನುವೆ ವಾರಣಾಸಿಯು ಮನವೆ ಭಾಗೀರಥಿ ॥
ಚಿತ್ತಶುದ್ಧಿ ಪಂಚಕ್ರೋಶ । ಗುರುವೆ ವಿಶ್ವನಾಥನು ॥ ೩ ॥

ಗುರುವೆ ಜ್ಞಾನಗಂಗೆಯು । ಗುರುವೆ ಶಾಂತಿಯಾಗರಾ ॥
ಗುರುವೆ ಧುಂಡಿ ದಂಡಪಾಣಿ । ಗುರುವೆ ಕಾಳಭೈರವಾ ॥ ೪ ॥

ಗುರುವೆ ಗಯಾ ವಿಷ್ಣುಪಾದ ಕಲ್ಪನೆ ವಟವೃಕ್ಷವು ॥
ಅಲ್ಲಿಸ್ನಾನ ಪಿಂಡದಾನ । ಜೀವಭಾವ ತ್ಯಾಗವು ॥ ೫ ॥

ಗುರು ಅಯೋಧ್ಯೆಪಟ್ಟಣಾ । ಗುರುವೇ ರಾಮಲಕ್ಷ್ಮಣಾ ॥
ಗುರುವೆ ಭರತ ಶತ್ರುಘ್ನ । ಗುರುವೆ ಸೀತಾ ಮಾತೆಯು ॥ ೬ ॥

ಗುರುವೆ ಗೋಕುಲೇಶನು । ಗುರುವೆ ವೃಂದಾವನಾ ॥
ಗುರುವೆ ಮಥುರೆ ದ್ವಾರಕೇಶಾ । ಗುರುವೆ ಹರಿದ್ವಾರವು ॥ ೭ ॥

ಗುರುವೆ ಬದರಿಕಾಶ್ರಮಾ । ಗುರುವೇ  ನಾರಾಯಣಾ ॥
ಜನನ ಮರಣ ಸಂಹರಣ । ಬ್ರಹ್ಮಕುಂಡ ದರುಶನಾ ॥ ೮ ॥

ಗುರುವೆ ಕೇದಾರೇಶನು । ಗುರುವೆ ರಾಮೇಶನು ॥
ಗುರುವೆ ಸಕಲ । ಜ್ಯೋತಿರ್ಲಿಂಗ ।
ಗುರುವೆ ಶಂಕರಾರ್ಯನು ॥ ೯ ॥

– **ಕೃಷ್ಣಕ್ಕ**

## ೩೨

(ಚಾಲ – ಜಾದುಗರ ಸೈಯ್ಯಾ ಎಂಬಂತೆ)

ನಮಿಸುವೆ ಗುರುವೆ । ನೀ ಕಲ್ಪತರುವೆ ।
ಚಿನುಮಯ ಘನವಿಭುವೇ ।
ಭವಭಯಹರ ಗುರುವೇ ॥ ಪ ॥

ಜ್ಞಾನಭೋಧ ನೀಡುವಾ । ಸ್ವಾನುಭವ ತೋರುವಾ
ಶ್ರೇಷ್ಠ ದೇಶಿಕ ನೀನೇ ॥
ತೋರಿಕೆ ಅನಿಸಿಕೆ । ಪುಸಿಯೆಂದುಸುರುವ
ಧೀರ ವೀರನು ನೀನೆ ॥
ಪರಮಾತ್ಮನೇ ನೀನಿರುವೆ ।
ಭವಭಯಹರ ಗುರುವೇ ॥ ೧ ॥

ಪ್ರಣವಾಕಾರಾ । ನೀ ನಿರ್ವಿಕಾರಾ ।
ತ್ರಿಗುಣಗಳಿಗೂ ದೂರಾ ॥
ಮನದಿ ವಿಚಾರಿಸಿ । ನೀ ನಿಶ್ಚಯಿಸೀ
ತಿಳಿವುದೆನ್ನುತ ವಿಧಿಸೀ ॥
ಬಲು ಪ್ರೇಮದಿ ಬೋಧಿಪನೇ
ಭವಭಯಹರ ಗುರುವೇ ॥ ೨ ॥

ಕನಸು ಎಚ್ಚರಗಳಾ । ತನಿನಿದ್ರೆಯನಾ
ತಾನೆ ಬೆಳಗುತಲಿರುವಾ ॥
ಘನಚೈತನ್ಯನೆ । ಆನಂದಾತ್ಮನೆ
ನೀನೇ ತಿಳಿಯೆಂದೆನುವಾ ॥
ಶ್ರೀಶಂಕರ ಸದ್ಗುರುವೇ ॥
ಭವಭಯಹರ ಗುರುವೇ ॥ ೩ ॥

**– ಜಯಮ್ಮ**

## ೩೩

(ಚಾಲ – ಮೇರಾ ದಿಲ್‌ಯೆ ಪುಕಾರೇ ಆಜಾ ಎಂಬಂತೆ)

ಕರುಣಾನಿಧಿ ಗುರುವೇ ಬಾರಾ ।
ಚಿರಶಾಂತಿಯ ತಾಣವ ತೋರಾ ॥
ಶರಣಾದೆನು ನಾ । ಸಲುಹುವದೆನ್ನಾ ॥ ಪ ॥

ಮುನ್ನ ಸಂಸಾರದೋಳ್ । ಕರ್ಮದಾ ಪಾಶದೋಳ್ ಸಿಲುಕಿದೇ ।
ಜನ್ಮಜನ್ಮಂಗಳಾ । ಹೊಂದುತಾ ತಾಪದೋಳ್ ।
ನಿನ್ನನೇ ಕಾಣದೆ । ನೊಂದೆನ್ಯೆ । ಬೆಂದೆನ್ಯೆ ಬೆಂದೆನ್ಯೆ ॥
ಮರೆತಿರೆ ನಿಜವಾ । ಪರತರ ಸುಖವಾ ।
ಪುರುಷೋತ್ತಮ । ಬೋಧಿಸು ಗುರೋ । ಶರಣಾದೇನು ನಾ ॥ ೧ ॥

ಜ್ಞಾನದಾ ಮಾರ್ಗವಾ । ಕಾಣದೇ ಕುರುಡನೋಲ್ ತಿರುಗಿದೆ ।
ಅನ್ಯಸಾಧನೆಗಳಾ । ಬನ್ನದೋಳ್ ಮಾಡಿ ನಾ ।
ಉನ್ನತಾನಂದನಾ । ಪಡೆಯದೆ । ಕೊರಗಿದೇ ಮರುಗಿದೇ ॥
ಚಿರಶಾಂತಿಯ ನಾ । ದೊರಕಿಪ ಜ್ಞಾನಾ । ನೀಡೈ ।
ನೀಡೈ ಶ್ರೀಶಂಕರಗುರೋ । ಶರಣಾದೆನು ನಾ ॥ ೨ ॥

**– ಜಯಮ್ಮ**

**ರಾ. ಬಾಗೇಶ್ರೀ** **ತಾ. ತ್ರಿವಟ**

## ೩೪

(ಚಾಲ – ಮೊಹೋಬತ್ ಹೀನ ಜೋ ಸಮಝೆ ಎಂಬಂತೆ)

ಇದೇ ಕೇಳ್ ಭಾಗವತಧರ್ಮ। ಸ್ವರೂಪಾನಂದದಾಮರ್ಮ।
ತಿಳಿಯದಾಮೂಢಮನುಜರಿಗೂ। ತಿಳಿಸುವಾ ಸುಲಭದಾಧರ್ಮ

॥ ಪ ॥

ಸದಾ ತನ್ನಂತರಂಗದಲಿ। ಮನನವಾಮಾಡಿ ಬೋಧೆಯನು।
ಸದಮಲಾತ್ಮಾನುಭವವ। ಪಡೆವುದಿದುವೇ
ಭಾಗವತಧರ್ಮ ಸ್ವರೂಪಾನಂದದಾ ಮರ್ಮ ॥ ೧ ॥

ಅಳೀ ನೀ ಭೇದಭಾವನೆಯಾನಿಕಾಯಾ। ಅಳೀ ನೀ। ತಿಳೀ ನೀ
ನಿರ್ವಿಕಲ್ಪಾನಂದವಿಭುವೆ। ನಾನೆ ಇಹೆನೆಂದು। ಸ್ವರೂಪಾ ॥ ೨ ॥

ಇದೋ ಮಿಥ್ಯಾ ಜಗವಿದೆಲ್ಲ। ತಿಳೀ ನೀನೆ ಕನಸಿನಂತೆ।
ಅದೊಂದೇ ಬ್ರಹ್ಮಸತ್ಯ। ಇದುವೆ ಶ್ರೀಗುರು ಶಂಕರನ
ಬೋಧಾ ಸ್ವರೂಪಾ ॥ ೩ ॥

**– ದೇವ**

## ೩೫

(ಚಾಲ – ಎ ದುನಿಯಾಮೆ ಯಹಾ ಮಿಲನಾ ಎಂಬಂತೆ)

ಇದೇ ಗೀತಾ ಮಹಾಮಂತ್ರಾ। ಭವಾಬ್ಧಿ ದಾಂಟುವಾ ಮಂತ್ರಾ ॥ ಪ ॥

ಮನುಜ ತಾ ನಿತ್ಯ ಈ ಗೀತಾ।
ಅನುದಿನಾ ಪಠಿಸುತಿರುವಾತಾ।
ಮುಕುತಿಪಂಥ ಪಡೆವ ನಿರುತಾ।
ಇದೇ ದೇಹದಲಿ ತಾನಿರುತಾ। ॥ ೧ ॥

ವಿರಾಗಿಯಾಗಿ ಮನದಲ್ಲಿ।
ಪರಾನಂದಾತ್ಮರೂಪವನು।
ತಿಳಿಯುವಾ ಚೈತನ್ಯರೂಪವನು।
ಇದೇ ಗೀತಾಪಠಣಫಲ ತಾ
ಪ್ರಶಾಂತಾಕಾಮನಾಗಿರುತಾ ॥ ೨ ॥

ನಿಧಾನಾ ನೊಂದಮನಸಿಗಿದೆ ।
ಪ್ರಧಾನಾ ಶಾಸ್ತ್ರಸಂಚಯ ದೇ ।
ಪ್ರಧಾನಾ ಷಟ್‌ಶಾಸ್ತ್ರಸಂಚಯದೇ ।
ಸದಾ ಧ್ಯಾನಾ ಇದೇ ಮನನಾ ।
ಮನುಜಗೇ ಇದುವೆ ಸುಖತಾಣಾ । ॥ ೩ ॥

ತಿಳಿ ನೀ ಗೀತೆಯಾ ಬೋಧಾ ।
ಅಳಿ ನೀ ಜೀವಪರಭೇದಾ ।
ತಿಳಿ ನೀ ಪರಮಾತ್ಮಪದ ಬೋಧಾ ।
ಪಡೆವೆ ಮೋದಾ । ಶ್ರವಣದಿಂದಾ ।
ಇದೇ ಶ್ರೀ ಶಂಕರನ ಬೋಧಾ ॥ ೪ ॥

**– ದೇವ**

## ೩೬

(ಚಾಲ – ಓ ಬಚಪನೆಕೇ ದಿನ್ ಭುಲಾನ ದೇನಾ ಎಂಬಂತೆ)

ಈ ವಿಬುಧರ ಸಂಗವೆ ಮಹಾಪ್ರಮೋದ ।
ದುರ್ಲಭ ಜ್ಞಾನಿಯ ನಿಜಾತ್ಮಬೋಧ । ॥ ಪ ॥

ಭಾಗ್ಯವಿದೇ ಬಹುಜನ್ಮದ ಪುಣ್ಯ ।
ಯೋಗ್ಯರಬೋಧಾ ದೊರಕುವದಣ್ಣ ।
ಭೋಗ್ಯದಿ ಲಂಪಟನಾದವಗಿನ್ನ ।
ಅಗ್ಗದಿ ಸಿಗುವದೆ ಸಜ್ಜನರನ್ನಾ ।
ಸ್ವರ್ಗದಿ ಸಿಗದಿಹ ಸಂತರ ಬೋಧ ।
ದುರ್ಲಭ ಜ್ಞಾನಿಯ ನಿಜಾತ್ಮಬೋಧ ॥ ೧ ॥

ಉಪದೇಶದಿ ಈ ಭವವನು ಕಡಿವಾ ।
ಬಾಧೆಯ ಸುಡುವಾ । ಮುಕುತಿಯ ಕೊಡುವಾ
ಹೃದಯದೊಳಿರುವಾ । ಆತ್ಮಸ್ವರೂಪ ।
ಜ್ಞಾನದಿ ತಿಳುಹಿಸಿ ಮೋದವ ಕೊಡುವಾ ।
ಸ್ವಾನುಭವಾನಂದಾನ್ವಿತರೂಪ
ಸನ್ನುತ ಶಂಕರಗುರುಸ್ವರೂಪ ॥ ೨ ॥

**– ದೇವ**

## ೩೭

(ಚಾಲ – ಆಯೀ ಆಯೀ ಯಾದಆಯಿ ಎಂಬಂತೆ)

ಕೇಳ್ಕೈ ಈಗಾ ಈ ಕರ್ಮಯೋಗಾ । ಕಳೆವುದು ಸಂಸಾರರೋಗಾ ॥ ಪ ॥

ಬಂಧಕ್ಕೆ ಈ ಕರ್ಮವೇ ಕಾರಣಾಗಿ ।
ಬಂದಿತು ಜನುಮಾ ಅನಿವಾರ್ಯವಾಗಿ ।
ಈ ಬಂಧವಾ ನೀಗಿ ಚಿರಶಾಂತಿಗಾಗಿ ।
ಈ ಯೋಗ ಬೆರಸಿ ಇದೆ ಕರ್ಮವೆಸಗಿ ।
ಅರ್ಪಿಸಿ ಫಲವಾ ಪರಮಾತ್ಮಭಾವಾ ।
ತಳೆಯುವದೆ ಈ ಕರ್ಮಯೋಗಾ । ಕಳೆವುದು ॥ ೧ ॥

ವಿಷಯಾಭಿಲಾಷಾ ನೀಗಿಸಿ ಆಶಾ ।
ಹರಿಸುವದಿದುವೇ ನಿಷ್ಕಾಮಕರ್ಮ ।
ಮನಸಿನ ಮಲಿನಾ ಕಳೆದೆಲ್ಲ ಹಸನಾ ।
ಮಾಳ್ಪುದು ಇದುವೇ ಜಿಜ್ಞಾಸೆಯೆನ್ನಾ ।
ಹುಟ್ಟಿಸಿ ಜ್ಞಾನಾ ಕೇಳ್ವ ಭಾನಾ ।
ಉದಿಸುವುದು ವೈರಾಗ್ಯಭಾಗ್ಯ । ಕಳೆವುದು ॥ ೨ ॥

ವಿಷಧಾತುಗಳ ತಂದು ಪುಟಹಾಕಿಕೊಂಡು ।
ಹೆಸರಾದ ಸಿದ್ಧೌಷಧಿ ಮಾಡಿಕೊಂಡು ।
ಉಪಯೋಗ ಕಂಡು ॥
ಜಡದೇಹಗಳ ಬೇನೆ । ನೀಗಿಪತೆರದಿ ।
ಈ ಕರ್ಮವಿಷವಾ । ಪುಟಹಾಕುತಿಹುದೀ ।
ನಿಷ್ಕಾಮತನದೀ ॥
ಈ ಸೂಕ್ಷ್ಮದೇಹಾ ರೋಗ ಕಳೆವಾ ।
ಘನವಾದ ಪರಮೋಪಾಯಾ ।
ಇದೇ ಪೇಳ್ದ ಗುರುಶಂಕರಾರ್ಯ ॥ ೩ ॥

– **ದೇವ**

## ೩೮

**ರಾ. ಭೀಮಪಲಾಸ** **ತಾ. ದಾದರಾ**

(ಚಾಲ – ಸೋ...... ಜಾ ಎಂಬಂತೆ)

ನಿ...... ನೇ ಪರಮಾತ್ಮನು ನೋಡೈ ॥ ಪ ॥

ವಿಚಾರಿಸೀ ನುಡಿ ಬೇಗ ।
ಸ್ವಮಾನಸದಿ ತಿಳಿಯೆಂದಾ ॥
ತಿಳಿಯೆ ದೇವನಾಗುವಿ ಎಂದಾ ।
ಗುರುಶಂಕರನಾ ಕಂದಾ ॥ ೧ ॥

**– ದೇವ**

## ೩೯

(ಚಾಲ – ಗಾಯೇ ಜಗೀ ತು ಮಿಲನಕೆ ಎಂಬಂತೆ)

ಇದೇ ಪುರುಷಾರ್ಥ । ಮನುಜ ಪರಮಾರ್ಥ ।
ಪಡೆವುದಿದು ವೇದಾರ್ಥ ।
ಇದನ್ನು ಬಿಸುಟಿನ್ನು । ಬಾಳುವೆ ಬದುಕನ್ನು ।
ಮಾಡುವದಿದುವೇ ವ್ಯರ್ಥ ॥ ಪ ॥

ದೇಹವಿರುವಾಗಲೇ ಪೂರ್ಣಪದವಾ ದೊರಕಿಪನೆ ಜಾಣ ।
ಮೋಹಮಾಯಾವಿಕಾರವ ದಾಂಟಿ ಪೋಗುವನೆ ಜಾಣ ।
ಸಾಹಸದಿ ಈ ಸಾವನು ನೀಗೀ ಮೋದಿಸುವ ಜಾಣ ।
ಉಳಿದ ನರ ಕೋಣ । ಅವನಿಯೊಳು ಪ್ರಾಣ ।
ತಳೆದಿರುವದೇ ವ್ಯರ್ಥ ॥ ೧ ॥

ತನ್ನ ಒಳಗಿರ್ದ ಸಂಪೂರ್ಣ ಸುಖವಾ । ಅರಿಯುವನೆ ಜಾಣ ।
ಭಿನ್ನವಾಗಿರ್ದ ತೋರಿಕೆ ಇದನಾ । ಬಾಧಿಸುವ ಜಾಣ ।
ಮುನ್ನ ಸುಖದುಃಖಗಳನು ನೀಗಿ । ನಿಲ್ಲುವನೆ ಜಾಣ ।
ಇವನೆ ಗುರುನಾಥಾ । ಶಂಕರ ಭಗವಂತಾ ।
ಪೇಳಿದನುಡಿ ವೇದಾರ್ಥ ॥ ೨ ॥

**– ದೇವ**

## ೪೦

(ಚಾಲ – ಘನ ಶ್ಯಾಮ ಸುಂದರಾ ಎಂಬಂತೆ)

ಇದೇ ಭಕ್ತವರ್ಯನ ಲಕ್ಷಣ । ಪಾವನವಿದು ಕಾಣಾ ।
ಕಾಣುವನಿವ ಪರಮಾತ್ಮಾ । ಸರ್ವಾತ್ಮಾ । ಕಾಣುವನಿವ ।
ಪರಮಾತ್ಮನರೂಪ । ಚರಾಚರದ ಜಗದಲ್ಲಿ ॥ ಪ ॥

ಇದೇ ಪರಿಯಲಿ ಸ್ವರೂಪದಲ್ಲಿ । ಜಗವೆಲ್ಲಾ ಕಾಂಬ ।
ಆತ್ಮರೂಪ ಭಗವಂತನೆ ಸತ್ಯ । ಮಿಕ್ಕುದೆಲ್ಲ ಮಿಥ್ಯ ।
ಲಕ್ಷ್ಯವೆಲ್ಲ ತನ್ನೊಳ್ ತಿರುಗಿಸಿ । ಆನಂದವ ಪಡೆವ ।
ಕಾಣುವನಿವ ಪರಮಾತ್ಮಾ । ಸರ್ವಾತ್ಮಾ ॥ ೧ ॥

ಸಂಸಾರದಲಿ ವಿಷಯದ ಭೋಗಾ । ಪ್ರಾರಬುಧದಲೀ ಪಡೆವಾಗ ।
ಮಾಯೆಮಾತ್ರವಿದು ಎನ್ನುತ ತಿಳಿವಾ ।
ನಿಜಾಸಕ್ತಿ ಪಡೆಯದಲೇ । ನಿರುತ ತನ್ನಯ ಹೃದಯಾಂತರದೀ ।
ಪರಮಾತ್ಮನ ನೆನೆವ । ದೇಹಾದಿಗಳ ಈ ಪರಿಣಾಮಗಳಿಗೇ
ಮೋಹಗೊಳಲಾರ । ಕಾಮನೆಯಾ ಬೀಜಾಂಕುರವೆಂದೂ
ನಾಟದು ಇವನಲ್ಲೀ । ಕಾಣುವನಿವ ಪರಮಾತ್ಮಾ । ಸರ್ವಾತ್ಮಾ ।
ಕಾಣುವನಿವ ಪರಮಾತ್ಮನ ರೂಪಾ । ಪ್ರಭೂಶಂಕರನರೂಪಾ ॥ ೨ ॥

**– ದೇವ**

## ೪೧

(ಚಾಲ – ರಾಜಾಕೀ ಆಯೆಗೀ ಎಂಬಂತೆ)

ಜಿಜ್ಞಾಸುವಿನ ಲಕ್ಷಣಾ । ಕೇಳು ನೀ ಈ ಕ್ಷಣಾ ।
ಪರಮಸುಖ ಕಾಂಕ್ಷಕನಾ ॥ ಪ ॥

ಬಾಳಿನವಿಷಯದಿ ಬೇಸರಗೊಳುತಾ । ವಿರತಿಯಿಂದಿರುವಾ ।
ತಾಳುತ ಪ್ರೇಮವ ಜ್ಞಾನಿಗಳಲಿ ತಾ । ಬೋಧ ಕೇಳ್ವನಿವಾ ॥
ಚಿತ್ತದಿ ಭಕ್ತಿಭಾವನಾ । ತಾಳುತ ಸಾಧನಾ ।
ಮಾಡುತಲಿಹನಿವ ಕಾಣಾ ॥ ೧ ॥

ಆತ್ಮಾನಾತ್ಮವಿವೇಕ ವಿಚಾರ । ಕೇಳುತ ತನ್ನೊಳಗೇ ।
ಮಿಥ್ಯಾರೋಪಿತ ಜೀವಭಾವವನಾ ।
ಜರೆಯುತ ಮನದೊಳಗೇ । ಮಾಡುವ ಸುವಿಚಾರಾ ॥
ಇವನೆ ಧೀರ । ಪರಮಸುಖಕಾಂಕ್ಷಕನಾ ॥ ೨ ॥

ವಿಷಯದಿ ಹರಿಯುವ ಮನವನೆಳೆದು । ಬೋಧದೊಳಗಿಡುವಾ ।
ಆ ಶಮೆದಮೆಗಳ ಸಾಧಿಸಿಕೊಳುತಾ । ಮೋದ ಹೊಂದುವ ತಾ ॥
ಶ್ರೀ ಗುರುಶಂಕರನಾ । ಆನಂದರೂಪನಾ ।
ಬೆರೆತು ತಾ ಸುಖಿಸುವನಾ ॥ ೩ ॥

– ದೇವ

**ರಾ. ಭೈರವಿ** **ತಾ. ದಾದರಾ**

## ೪೨

(ಚಾಲ – ತೂ ಗಂಗಾಕೆ ಪಾರಮ್ಯೆ ಎಂಬಂತೆ)

ಈ ದೇಹಾಭಿಮಾನವೇ ಸಂಸಾರ ಮೂಲ ।
ಈ ದೇಹಾಭಿಮಾನವೇ ।
ಸಂಸಾರಮೂಲವಯ್ಯಾ ಕೇಳೀಗಲೇ । ಜ್ಞಾನದಿಂದಾ ।
ಈ ಜ್ಞಾನದಿಂದ ಈ ದೇಹಾಭಿಮಾನ ದೂಡು ನೀ ।
ದೂಡು ನಿನ್ನಭಿಮಾನ ॥ ಪ ॥

ವಿಷಯಾಭಿಲಾಷಾ ಮನದಲ್ಲಿ ಮೂಡಿ ।
ಜೀವಂಗೆ ಗುಣದಲ್ಲಿ । ಅನುರಾಗ ಕೂಡಿ ।
ಇದೇ ಭೋಗವೇ ಮುಂದೆ । ಸುಖದುಃಖವಾಗಿ ।
ಜನುಮಕ್ಕೆ ಮೂಲಾದಿದೇ ವಾಸನಾಳಿ । ಇದೇ ವಾಸನಾಳಿ ॥

ಇದೇ ಬಾಳುವೆ ಇದೇ ಬಾಳುವೆ ।
ಇದೇ ಬಾಳು ದೇಹಾಭಿಮಾನಾಸ್ಪದಾ ।
ಮೂಲ ಕೇಳೀಗಲೇ ಜ್ಞಾನದಿಂದ ॥ ೧ ॥

ಮನದೇಹಗಳು ಎನ್ನ ನಿಜರೂಪವಲ್ಲ ।
ಇವು ತೋರಿ ಬಯಲಾಗುತಿಹವಾಗಿವೆಲ್ಲ । ನಿಜರೂಪವಲ್ಲ ।
ಇದರಾಚೆಗಿಹ ಶುದ್ಧ ಚೈತನ್ಯ ನಾನೇ ।
ಮನಬುದ್ಧಿಗಾಧಾರ ಚಿನ್ಮಾತ್ರ ನಾನೇ । ಸತ್ಯಾತ್ಮ ನಾನೇ ॥
ಅದೇನಾನಿಹೆ ಅದೇನಾನಿಹೆ । ಅದೇ ಸತ್ಯವೆಂದಾಗ
ಹರಿವುದು ದೇಹಾಭಿಮಾನ ನೋಡು ನೀ । ಜ್ಞಾನದಿಂದ ॥ ೨ ॥

ಈ ರೀತಿ ಸುವಿಚಾರವನು ಮಾಡಿಕೊಂಡು । ನಿಜವನ್ನು ಕಂಡು ।
ಸ್ವರೂಪಾತ್ಮನೊಳು ನೀನು ನೆಲೆನಿಂತುಕೊಂಡು ।
ಇದೆಲ್ಲ ಈ ಸಂಸಾರ ಕನಸೆಂದು ಕಂಡು ॥
ಪರಮಾತ್ಮನನೆ ವೃತ್ತಿಯೊಳು ತುಂಬಿಕೊಂಡು ।
ಆನಂದ ಉಂಡು । ಬಿಡೋ ಚಿಂತೆಯ ಬಿಡೋ ಚಿಂತೆಯಾ ।
ಬಿಡೋ ಬಾಳ ಚಿಂತೆಯಾ ಶ್ರೀಶಂಕರಾಚಾರ್ಯರೀ–
ಬೋಧದ । ಜ್ಞಾನದಿಂದ ॥ ೩ ॥

**– ದೇವ**

## ೪೩

(ಚಾಲ – ಜಾನೇಭಿ ಜಿಗರ್ ಎಂಬಂತೆ)

ಈ ಸಾಧನೆಯ । ಈ ಧರ್ಮಗಳ ಗುರಿಯೊಂದೆ ಕೇಳಿರಿ ಇಂದೇ ।
ಪರಮಾತ್ಮಪ್ರಾಪ್ತಿ । ಇದರಿಂದೇ ॥ ಪ ॥

ನಿಷ್ಕಾಮ ಕರ್ಮವ ಮಾಡುವದು ।
ನಿಷ್ಕಾಮ ಭಕುತಿಯ ಮಾಡುವದು ।
ಆ ವೈರಾಗ್ಯ । ಆ ಸುವಿವೇಕ ।
ಮನದಲ್ಲಿ ಮೂಡುವದಿಂದೇ । ಪರಮಾತ್ಮಪ್ರಾಪ್ತಿ ॥ ೧ ॥

ವಿಷಯಾಭಿಲಾಷಾ ಬಿಡುವುದಕೆ ।
ಮನದಲ್ಲಿ ಸ್ಥಿರತೆಯು ನಿಲುವುದಕೆ ॥
ಗುರು ಬೋಧೆಯಲಿ ಮನ ರಮಿಸುತಲಿ ।
ಜಿಜ್ಞಾಸೆ ಮೂಡುವದಿಂದೇ । ಪರಮಾತ್ಮಪ್ರಾಪ್ತಿ ॥ ೨ ॥

ಹಗುರಾದ ಸಾಧನವಿದಕೆಲ್ಲ ।
ಜಗದಲ್ಲಿ ಇರುವ ಜನಕೆಲ್ಲ ।
ಅಘನಾಶಕ ಶ್ರೀಶಿವಶಂಕರನೋಳ್ ।
ಘನಪ್ರೇಮ ಬಕುತಿಯಿದೊಂದೇ । ಪರಮಾತ್ಮಪ್ರಾಪ್ತಿ ॥ ೩ ॥

**– ದೇವ**

**ರಾ. ಖಮಾಜ** **೪೪** **ತಾ. ತ್ರಿವಟ**

ಪರಮಾತ್ಮನ ನೆನೆಯಲು ಬೇಕು ।
ಪರತರಸುಖವನು ಪಡೆಯುವನಿದರಿಂ ।
ದುರಿತಗಳೆಲ್ಲವ ನೀಗಲು ತಾ ॥ ಪ ॥

ಮೊದಲನೆ ಕಾರ್ಯವು ಜೀವರೆಲ್ಲರಿಗೆ ।
ಇದು ಬಲು ಸುಲಭವು ಸಾಧನಗಳಲೀ ॥
ಪದುಮನಾಭನನು ನೆನೆಯದಿರುವವ ।
ಅಧಮನು ಜಗದಿ ವ್ಯರ್ಥ ಜೀವಿಸುವ ॥ ೧ ॥

ಎಲ್ಲ ವೇದಗಳು ಎಲ್ಲ ಶಾಸ್ತ್ರಗಳು ।
ಎಲ್ಲ ಸಾಧನೆಗಳು ಆತನ ಪ್ರಾಪ್ತಿಗೆ ॥
ಬಲ್ಲವರಿಂದಲಿ ತಿಳಿದು ವಿಚಾರಿಸಿ ।
ನಿಲ್ಲದೆ ಸಾಧನೆ ಕೈಕೊಳ್ಳುವುದು ॥ ೨ ॥

ಕೇಳುವದ್ಯೆ ಪರಮಾತ್ಮನ ತತ್ವವ ।
ತಿಳಿವುದು ತನ್ನೊಳು ತಾನೇ ನಿರುತಾ ॥
ಪೇಳಲೇನು ಧ್ಯಾನಿಸುವುದಾತನ ।
ಮೇಳವಿಸುವದ್ಯೆ ಜೀವನ್ಮುಕುತಿ ॥ ೩ ॥

ನಾರಾಯಣನೇ ಪರಮಗತಿಯು ಈ ।
ನರಜನ್ಮಕೆ ಬಂದಿರೆ ಲಾಭವಿದೇ ॥
ಅರಿತು ಇದನು ತಾ ಸಾಧನೆ ಮಾಳ್ಪುದು ।
ಗುರುಶಂಕರನಾ ಬೋಧಸಾರವಿದು ॥ ೪ ॥

**– ದೇವ**

**ರಾ. ಅಸಾವೇರಿ** **೪೫** **ತಾ. ಝಂಪಾ**

ಅಜ್ಞಾನಿ ಜೀವನಿಗೆ ಅಭಿಮಾನ ಬಹಳ ।
ಸುಜ್ಞಾನಿಯಾ ನುಡಿಯ ಲಕ್ಷಿಸನು ಕೇಳಾ ॥ ಪ ॥

ಬುದ್ಧಿ ಮನದೇಹಗಳು ತಾನೆಂದು ತಿಳಿಯುತಲಿ ।
ಇದ್ದುದನು ಮರೆತು ತಾ ಜಾಣನೆನಿಸುವನು ॥

ಒದ್ದಾಡುತಿದ್ದರೂ ಅಭಿಮಾನವನೆ ಪೊತ್ತು।
ಗುದ್ದಾಡುತಲಿ ತಾನು ಸುಖವ ಹುಡುಕುವನು ॥ ೧ ॥

ಸಟೆಯಾದ ಸಂಸಾರ ದಿಟವೆಂದು ನಂಬುತಲಿ।
ಸೆಟೆದಾಡುತಿರುವೆಯೋ ತಿಳಿದು ನೋಡಾ ॥
ಹಟವ ಹಿಡಿಯಲು ಬೇಡ ತೋರ್ಪುದೇ ದಿಟವೆಂದು।
ನಟನೆಯಾ ಮಾತಲ್ಲವೆನೆ ಕೇಳನವನು ॥ ೨ ॥

ಬರಿಯ ಜಂಭವು ಬೇಡ ಅರಿ ನೀನು ನಿನ್ನ।
ಅರಿವಿನಾ ಹೊರತು ನೀ ಸುಖ ಪೊಂದಲಾರೆ ॥
ಆರು ಸುಖಪಡೆದಿಲ್ಲ ಅಜ್ಞಾನದಿಂದೆನಲು।
ಇರಲಿ ಹೋಗೆಂದೆನುತ ಮೋರೆ ಹೊರಳಿಸುವಾ ॥ ೩ ॥

ಬಾಳುವೆಯು ನಿಜವೆಂದು ನಂಬಲಿವನಾ ಗೋಳು।
ಗಾಳಿಯನೆ ಗುದ್ದಿ ಮೈ ನೊಯ್ಸಿಕೊಂಡಂತೆ ॥
ಕೇಳು ಚಿತ್ರದೊಳಿರುವ ಬೆಂಕಿ ತಾ ದಿಟವೆಂದು।
ಮೇಲೆ ನೀರೆರೆದಂತೆ ಎನೆ ಕೇಳನವನು ॥ ೪ ॥

ಗೊಡ್ಡು ಮಾತೆಂದು ತಾ ಜ್ಞಾನಕೆರವಾಗುತಲಿ।
ದಡ್ಡತನವನೆ ತೋರಿ ದುಃಖಿಯಾಗುವನು ॥
ಶುದ್ಧಜ್ಞಾನವನಂಬಿ ತನ್ನ ತಾ ತಿಳಿಯದಲೆ।
ಬುದ್ಧಶಂಕರನುಕ್ತಿಗೆರವಾಗುತಿಹನು ॥ ೫ ॥

– ದೇವ

**ರಾ. ಮಾಲಕಂಸ** **೪೬** **ತಾ. ಝಂಪಾ**

ಮೂರ್ಖ ತಿಳಿವನೆ ಗುರುವೆ ನಿನ್ನ ಬೋಧದ ಸವಿಯ।
ಅರ್ಕನಾ ತೇಜವನು ಗೂಗೆಯರಿದಪುದೇ ॥ ಪ ॥

ನೀನೆ ಪರಮಾತ್ಮನಿಹೆ ಎಂದು ನೀ ಬೋಧಿಸಲು।
ಹೀನ ಮಾನವ ನಾನು ಪರಮಾತ್ಮನೆ ॥
ಏನಾದರೂ ಪೇಳಿ ಮೋಸಮಾಳ್ಪನು ಎಂದು।
ಸ್ವಾನುಭವ ಪಡೆಯದಲೆ ನಿನ್ನ ನಿಂದಿಸುವಾ ॥ ೧ ॥

ಕರ್ಮದಾ ಸಂಕಲೆಯ ಕಟ್ಟಿಕೊಂಡಿಹ ಜೀವ ।
ಕರ್ಮ ಕಳೆಯುವ ದಿವ್ಯ ಜ್ಞಾನವರಿಯುವನೇ ॥
ದುರ್ಮತಿಯು ದ್ವೇಷಿಸುತ ಬೋಧದಲಿ ಮನವಿಡದೆ ।
ಧರ್ಮವಂತನು ಎಂಬ ಒಣ ಹೆಮ್ಮೆ ಪಡುತಿರುವ ॥ ೨ ॥

ಈ ನಿಂದೆ ಸ್ತೋತ್ರಗಳಿಗೊಳಗಾಗುವವನೆ ನೀ ।
ಸ್ವಾನುಭವಸಂವೇದ್ಯ ಕೇವಲಾನಂದಾ ॥
ನೀನೆ ಸರ್ವವ್ಯಾಪಿ ನಿನ್ನ ನಿಂದಿಸಿದೊಡೆ ।
ತಾನು ತನ್ನನು ಬೈದು ದೂರಿಕೊಂಡಂತೆ ॥ ೩ ॥

ಜಗದ ಸುಖಕಾಗಿ ಬಲು ಕಾತರಿಪ ಮನುಜನಿವ ।
ಜಗದಾಚೆಗಿಹ ಪರಮಶಾಂತಿಯರಿಯುವನೇ ॥
ಸೊಗಸಾಗಿ ತಿಳಿಯುವೊಡೆ ಜಿಜ್ಞಾಸುವಲ್ಲದೆ ।
ಅಘನಾಶಶಂಕರನೆ ಅನ್ಯರರಿಯುವರೇ ॥ ೪ ॥

**– ದೇವ**

**ರಾ. ಭೀಮಪಲಾಸ** **೪೭** **ತಾ. ತ್ರಿವಟ**

(ಚಾಲ – ಅತಿ ಗೋಡ ಗೋಡ ಲಲಕಾರಿ ಎಂಬಂತೆ)

ಗುರುಬೋಧ ಪರಮಸುಖಕಾರಿ ।
ಬಾರಿಬಾರಿಗೂ ಕೇಳೈ ಭವರೋಗೀ ॥ ಪ ॥

ಬಿಡು ಬಾಳಿನ ಭ್ರಮೆಯ ಸಂಸಾರಿ ।
ದುಃಖದ ಬಾಳಿದು ವಿನಾಶಕಾರಿ ॥
ಇದರೊಳು ಸಿಗುತಿಹ ಸುಖವು ವಿಕಾರಿ ।
ತಿಳಿಯೈ ಮುಕ್ತನಾಗಲಿದು ದಾರಿ ॥ ೧ ॥

ಅರಿ ನಿನ್ನಯ ನಿಜವಾ ಸುವಿಚಾರಿ ।
ಅರಿವೇ ನಿನ್ನಯ ಈ ಭವತಾರಿ ॥
ಬೇರಾವುದು ನಿನಗಾಗದು ದಾರಿ ।
ಈ ನುಡಿ ಪೇಳುತಿಹುದು ಶ್ರುತಿಸಾರಿ ॥ ೨ ॥

ಜಾಗರಾ ಕನಸು ನಿದ್ರೆಯ ಮೀರಿ।
ಅಮರವಾಗಿರುವ ಪದವನೆ ತೋರಿ॥
ಅದೆ ನೀನೆನ್ನುತ ಪರಿಪರಿ ಸಾರಿ।
ಶಂಕರಬೋಧವಿದುವೆ ಭವಹಾರಿ ॥ ೩ ॥

– ದೇವ

**ರಾ. ಯಮನ** **೪೮** **ತಾ. ದೀಪಚಂದಿ**

ಭಾಗ್ಯ ಬೇಕ್ಕೈ ಗುರುವೇ। ಬೋಧವ ಕೇಳೆ।
ಭಾಗ್ಯ ಬೇಕ್ಕೈ ಜೀವಿಗೆ। ಭಾಗ್ಯದ ಹೊರತಾಗಿ।
ಯೋಗ್ಯವಾಗಿಹ ಬೋಧ। ಭೋಗಲಂಪಟ ಭವ–
ರೋಗಿಗೆ ದೊರಕೀತೆ? ॥ ಪ ॥

ಮಾನವಜನ್ಮವ ತಾಳೆ ಬೇಕೆಲೋ ಭಾಗ್ಯ।
ಹೀನಬಾಳುವೆ ಬೇಸರಾಗೆ ಬೇಕೆಲೋ ಭಾಗ್ಯ॥
ಜ್ಞಾನಿಯ ದರುಶನವಾಗೆ ಬೇಕೆಲೋ ಭಾಗ್ಯ।
ತಾನು ತನ್ನಯ ನಿಜವ ತಿಳಿಯೆ ಪರಮ ಭಾಗ್ಯ ॥ ೧ ॥

ಬಾಳಿನ ಸುಖಕಾಗಿ ಆಳಾಗಿ ದುಡಿವಂಗೆ।
ಕೀಳುತನದಿ ಜ್ಞಾನವಲ್ಲಗಳೆಯುವಗೆ॥
ಮೇಲು ತಾನೆಂದು ತಿಳಿದೋಡಾಡುವವನಿಗೆ।
ಕಾಲನಂಜಿಕೆ ಕಳೆವ ಬೋಧವು ತಿಳಿವೊಡೆ ॥ ೨ ॥

ಏನಾದೊಡೇನಯ್ಯ ಎನ್ನ ಪೂರ್ವದಭಾಗ್ಯ।
ನಾನಾದೆ ದೇವನು ಗುರು ನೀನೇ ಯೋಗ್ಯ॥
ಹೀನರ ಕೊಂಡೇನು ನಾನೊಂದು ಪಾರಾದೆ।
ಜ್ಞಾನಿಶಂಕರನೆ ನಾನಾದೆ ಎನ್ನಯ ಭಾಗ್ಯ ॥ ೩ ॥

– ದೇವ

ರಾ. ಸಾರಂಗ ೪೯ ತಾ. ಝಂಪಾ

ಏಕೆ ಚಿಂತಿಸಲಯ್ಯ ಈ ಜಗದ ಸುಖಕಾಗಿ ।
ಸಾಕು ಇದರೊಳು ಸುಖದ ಲೇಶವನು ಕಾಣೆ ॥ ಪ ॥

ಒಂದು ಸುಖ ಬಯಸಿದೊಡೆ ಹಿಂದೆ ನೂರೆಂಟಾಗಿ ।
ಸಂದಣಿಪ ದುಃಖಗಳು ಬಂದು ಒದಗುವಿದಕೆ ॥
ಎಂದಿಗೂ ಬಯಸೆನಾ ಈ ತೆರೆದ ಸುಖವನ್ನು ।
ಹಿಂದಿನಾ ಕರ್ಮದಂತಾಗುತಿರುವುದಕೆ ॥ ೧ ॥

ಮೊದಲು ಸವಿಯಾಗಿಹುದು ತುದಿಯಲಿದು ವಿಷವಹುದು ।
ಬದಲಾಗುತಿಹ ಇಂಥ ಸುಖ ಬೇಡವೆನಗೆ ॥
ಮೊದಲು ಕೊನೆ ಇಲ್ಲದಿಹ ಸದಮಲಾನಂದಮಹ ।
ಪದವ ಮರೆಯಿಸುತಿರುವದಿದು ಬೇಡವೆನಗೆ ॥ ೨ ॥

ಅನಿಸಿಕೆಯು ಕೂಡಿರುವ ಈ ಸುಖವು ನಿಜವಲ್ಲ ।
ಮನವಾಣಿಗಳಿಗಾಚೆಗಿಹ ಸುಖವು ನಿಜವು ॥
ತಾನೆ ಸುಖರೂಪನೆಂದನಿತರೊಳು ನಿಶ್ಚಯಿಸಿ ।
ಜ್ಞಾನಿಶಂಕರನೆ ನಾನಾದ ಮೇಲಿನ್ನು ॥ ೩ ॥

– ದೇವ

ರಾ. ಮಾಲಕಂಸ ೫೦ ತಾ. ಝಂಪಾ

ಮುಕ್ತಪುರುಷನ ಲಕ್ಷಣಂಗಳನು ಪೇಳುವುದು ।
ಯುಕ್ತಮಲ್ಲತಿವ್ಯಾಪ್ತಿದೋಷಮಕ್ಕು ॥ ಪ ॥

ಭವಿತವ್ಯತೆಯ ಪೇಳುವವ ಮುಕ್ತನೆಂದೊಡೆ ।
ದೈವಜ್ಞರೆಂಬುವರು ಮುಕ್ತರೇಕಲ್ಲಾ ॥
ನವಚಮತ್ಕೃತಿಯ ಮಾಳ್ಪವ ಮುಕ್ತನೆಂದೊಡೆ ।
ಶಿವಶಿವಾ ಗಾರುಡಿಯು ಮುಕ್ತನೇಕಲ್ಲಾ ॥ ೧ ॥

ಹಣಕಾಸುಗಳ ಹಿಡಿಯದವ ಮುಕ್ತನೆಂದೊಡೆ ।
ವನಚರರು ತಾವೇಕೆ ಮುಕ್ತರಲ್ಲಾ ॥
ಮನವು ಸಂಚಲಿಸದವನೇ ಮುಕ್ತನೆಂದೊಡೆ ।
ತನಿನಿದ್ದೆ ಗೈವರೇತಕೆ ಮುಕ್ತರಲ್ಲಾ ॥ ೨ ॥

ಸಿಟ್ಟುಸಿಡುಕುಗಳಿಲ್ಲದವ ಮುಕ್ತನೆಂದೊಡೆ ।
ತೊಟ್ಟಿಲೊಳಗಿಹ ತರಳ ಮುಕ್ತನೇಕಲ್ಲಾ ॥
ಬಟ್ಟೆಯಿಲ್ಲದೆ ತಿರುಗುವವ ಮುಕ್ತನೆಂದೊಡೆ ।
ಪುಟ್ಟ ಹುಡುಗರು ತಾವು ಮುಕ್ತರೇಕಲ್ಲಾ ॥ ३ ॥

ದೇಹೇಂದ್ರಿಯಪ್ರಾಣಬುಧ್ಯಾದಿಗಳಿಗಿರ್ಪ ।
ಬಾಹ್ಯಲಕ್ಷಣಗಳು ಆತ್ಮಗಿಲ್ಲ ॥
ದೇಹಾಭಿಮಾನಿಗೇ ಲಕ್ಷಣಗಳಲ್ಲದೆ ।
ಸೋಹಮೆನಿಪಾತ್ಮಾನುಭಾವಿಯೊಳಗುಂಟೇ ॥ ೪ ॥

ತೋರುವೀ ಲಕ್ಷಣಗಳೊಂದಿಲ್ಲದಿರ್ದೊಡಂ
ಧೀರನಾತ್ಮಜ್ಞಾನಿ ಮುಕ್ತನೈಸೆ ॥
ಬೇರೆ ಪಶ್ವಾದಿಗಳಲೀ ಲಕ್ಷಣಂಗಳು ।
ತೋರಿದೊಡದೇಂ ಫಲವೊ ನಾರಾಯಣ ॥ ೫ ॥

– ಶ್ರೀ ಶಂಕರ

**ರಾ. ಪಿಲು** **೫೧** **ತಾ. ತ್ರಿವಟಿ**

ದೇವನ ತೋರಿಸಿದಾ । ಸದ್ಗುರು । ಜೀವನ ಜಾರಿಸಿದಾ ॥
ಸಾವನು ಹಿಂಗಿಸಿ । ನೋವನು ಭಂಗಿಸಿ ।
ಪಾವನಾತ್ಮನಲಿ ಭಾವವ ನಿಲಿಸಿ ॥ ಪ ॥

ವಿಷಯವಿಪಿನದೊಳಗೆ । ನಾ ಬಲು । ಬಸವಳಿಯುತಲಿದ್ದೆ ॥
ಒಸರುವ ಪ್ರೇಮದಿ ಕೈಪಿಡಿದೆನ್ನನು ।
ಹಸನಹಾದಿಯೊಳು ನಡೆಸುತ ಕಡೆಗೆ ॥ ೧ ॥

ವಿಶ್ವವೆಂಬುವ ಗುಡಿಯು । ಅದರೊಳು ಶಾಶ್ವತ ಚಿನುಮಯನು ॥
ದೃಶ್ಯವಿಲಕ್ಷಣ । ದೇವನ ನೋಡೈ ।
ಶಿಷ್ಯನೆ ಎನ್ನುತ ಕರವನು ಪಿಡಿದು ॥ ೨ ॥

ಮರವು ಎಂಬುವ ಪರೆಯು । ಕಣ್ಣನು ಕುರುಡು ಮಾಡುತಿರಲು ॥
ಅರಿವೆಂಬೌಷಧವನೆ ಹಾಕುತ್ತ ।
ಅರಿಯೊ ನೀನೇ ನಾರಾಯಣನೆನುತ ॥ ३ ॥

– ಶ್ರೀ ಶಂಕರ

ರಾ. ಸಾರಂಗ **೫೨** ತಾ. ದಾದರಾ

ಪಯಣವೆಲ್ಲಿಗೆ । ಪಥಿಕಾ ಪಯಣವೆಲ್ಲಿಗೆ ॥
ಭಯದಿ ಭ್ರಾಂತನಾಗಿರುತ್ತ । ಬಯಸುತೇನ ನಡೆದೆಯತ್ತ ॥ ಪ ॥

ಬೇಕೆನಿಸುವದೆಲ್ಲವುಂಟು ।
ಸಾಕೆನ್ನುವ ನೀನು ಉಂಟು ॥
ಸಾಕಾಗದೆ ನಿನಗೆ ಮತ್ತೆ ।
ಬೇಕಾಗಿಹುದೇನು ಕತ್ತೆ ॥ ೧ ॥

ತಿಳಿದು ನೋಡೆ ನೀ ಕೃತಾರ್ಥ ।
ತಿಳಿಯದಿರಲು ಜನ್ಮವ್ಯರ್ಥ ॥
ತಿಳಿಯಲಾಗದೇಕೊ ಅರಿಯೆ ।
ಕೆಳಗೆ ನೋಡುತಿರುವೆ ಕುರಿಯೆ ॥ ೨ ॥

ತಿರುಗಿ ತಿರುಗಿ ತಿರುಕನಾಗಿ ।
ಮರುಗಿ ಮರುಗಿ ಮರ್ತ್ಯನಾಗಿ ॥
ಸೊರಗಿ ಸೊರಗಿ ಸಾಯಲಾಗಿ ।
ಗುರುನಾರಾಯಣನ ನೀಗಿ ॥ ೩ ॥

– ಶ್ರೀಶಂಕರ

ರಾ. ದುರ್ಗಾ **೫೩** ತಾ. ದಾದರಾ

ಬೋಧದ ಘನಮಳೆಯುಸುರಿದು ।
ಮುಕುತಿಬೆಳೆಯು ಬಂದುದು ॥ ಪ ॥

ಮಾಯೆಯ ಬಲು ಬಿಸಿಲುತಾಪ ।
ಕಾಯದೊಳಗೆ ಹೆಚ್ಚುತಿರಲು ॥
ಹೇಯವೆನಿಸಿ ಜನನಮರಣ ।
ಮುಮುಕ್ಷುತ್ವ ಮೋಡಗವಿದು ॥ ೧ ॥

ಸುವಿಚಾರದ ಮಿಂಚು ಹೊಳೆದು ।
ಶ್ರುತಿಶಿರಗಳ ಗುಡುಗು ಹೊಡೆದು ॥
ಶ್ರವಣದ ಸುಳಿಗಾಳಿ ಬೀಸಿ ।
ಭವತಾಪವ ಹರಿಸುತಿರಲು ॥ ೨ ॥

ವೈರಾಗ್ಯದ ರಂಟೆ ಹೊಡೆದು ।
ಶಮೆದಮೆಗಳ ಹರತೆಯಾಗಿ ॥
ಪರಮಾರ್ಥದ ಬೀಜ ಬಿದ್ದ ।
ನರಜನ್ಮದ ಹೊಲದ ಮೇಲೆ ॥ ೩ ॥

ದೃಷ್ಟಿಯೊಳಗಿನಾನಂದ ।
ಸೃಷ್ಟಿಯಾಗಿ ತೋರಿ ಚಂದ ॥
ಶ್ರೇಷ್ಠನಾದ ಶಂಕರಗುರು ।
ವರನ ಸಹಜಕರುಣೆಯಿಂದ ॥ ೪ ॥

**– ದೇವ**

**ರಾ. ಪಟದೀಪ** **೫೪** **ತಾ. ಝಂಪಾ**

ಅಜ್ಞಾನಹೋಮದಾ ಅಗ್ನಿಹೋತ್ರಿಯು ತಾನು ।
ಸುಜ್ಞಾನಸ್ವರ್ಗವನು ಸೇರಿ ಸುಖಿಸಿಹನು ॥ ಪ ॥

ತನುವು ಯಜ್ಞದ ಶಾಲೆ ಮನವು ಬ್ರಹ್ಮನು ಅಲ್ಲಿ ।
ಅನಿಸಿಕೆಗಳುದ್ಗಾತೃಹೋತೃಋತ್ವಿಜರು ॥
ಘನತರದ ಶ್ರದ್ಧೆಯಂಬಿನಿಯಳೊಡಗೂಡಿದಾ ।
ಚಿನುಮಯಾತ್ಮಾರಾಮ ದೀಕ್ಷಿತನು ಮೆರೆವ ॥ ೧ ॥

ಎದೆಯೆ ಯಜ್ಞದ ಕುಂಡ ಅದರಲ್ಲಿ ಜ್ಞಾನಾಗ್ನಿ ।
ಮುದದಿಂದ ಹೊತ್ತಿಸುತ ಕರ್ಮಕಾಷ್ಠಗಳಾ ॥
ಒದಗಿಸಿ ಶಮಾದಿಗಳೆ ಸಾಮಗ್ರಿಯಾಗಿರಲು ।
ಸದಸದ್ವಿವೇಕಸಾಮವನು ಘೋಷಿಸುವಾ ॥ ೨ ॥

ಅನಿಸಿಕೆಯು ಸತ್ಯವೆನ್ನುವ ಹವಿಯ ಹಾಕುತಲಿ ।
ಕನಸಿದೆಲ್ಲವು ಎಂಬ ಸ್ಮೃತಿರೂಪ ಶಿಖಿಯ ॥
ಘನವಾಗಿ ಹೊತ್ತಿಸುತ ದೇಹಬುದ್ಧಿಯ ದಹಿಸಿ ।
ಜನನಮರಣದ ಭಸ್ಮಮಾಡಿ ಪೂಸುವನು ॥ ೩ ॥

ವಾಸನಾಪಾಶವೆನ್ನುವ ಪಶುವ ವಧಿಸುತಲಿ ।
ಮೀಸಲಾಗಿಹ ಜ್ಞಾನಸೋಮವನು ಕುಡಿದು ॥

ಆ ಸಕಲಯಾಗಗಳ ಭೋಕ್ತೃ ತಾನಾಗುತಲಿ ।
ನಾಶವಿಲ್ಲದ ಸ್ಥಿತಿಯನಾಕ್ಷಣದಿ ಪಡೆವ ॥ ೪ ॥

ಚಿನುಮಯನೆ ತಾನೆಂಬ ಜ್ಞಾನಗಂಗಾಜಲದಿ ।
ಅನುಭವದ ಅವಭೃತಸ್ನಾನವನು ಮಾಡಿ ॥
ತನುವಿದಿರುವಾಗಲೇ ಆನಂದಧಾಮದಲಿ ।
ಅನವರತ ನೆಲೆಸಿರುವ ಶಂಕರಾನಂದಾ ॥ ೫ ॥

**– ದೇವ**

**ರಾ. ಮಾಂಡ** **೫೫** **ತಾ. ಕವಾಲಿ**

ಕುಣಿವೆ ಕುಣಿಯುತಿದ್ದಿ । ನೀ । ಮಣಿದೆ ಮಣಿಯುತಿದ್ದಿ ।
ದಣಿದು ಮರವ ಹೊದ್ದಿ । ನೀ । ನೆನಹನುಳಿದುಬಿದ್ದಿ ॥ ಪ ॥

ಎಚ್ಚರದಲಿ ಜಾಣೆ । ಹುಚ್ಚಿ ಕನಸು ಕಾಣೆ ।
ಅಚ್ಚನಿದ್ದೆ ತಾನೆ । ಮುಚ್ಚಿಬಿಟ್ಟುದೇನೆ ॥ ೧ ॥

ಎದ್ದು ನೋಡೆ ಬಾಳು । ನಿದ್ದೆಯಲ್ಲಿ ಬೀಳು ।
ಇದ್ದುದೇನೆ ಗೋಳು । ಸುದ್ದಿ ಸ್ವಲ್ಪ ಹೇಳು ॥ ೨ ॥

ನೀನು ನೋಡಲಿಲ್ಲ । ನಾನು ಇಲ್ಲದಿಲ್ಲ ।
ಏನು ಮೋಜು ಎಲ್ಲ । ಮೌನವಾದುದೆಲ್ಲ ॥ ೩ ॥

ನಿದ್ದೆಯಲ್ಲಿ ನೀನು । ಬಿದ್ದು ಮುಳುಗಿದೇನು ।
ಸದ್ದನಳಿದು ನಾನು । ಇದ್ದುದಿಲ್ಲವೇನು ॥ ೪ ॥

ಇಲ್ಲದಿದ್ದೊಡೆತ್ತ । ನಿಲ್ವತಾಣಮತ್ತ ।
ಕಲ್ಲಾಗಿದ್ದೆನುತ್ತ । ಗುಲ್ಲ ಮಾಳ್ಪೆ ತೊತ್ತ ॥ ೫ ॥

ಕಲ್ಲಿಗೆಲ್ಲಿ ತಿಳಿವು । ಬಲ್ಲಗೆಲ್ಲಿ ಅಳಿವು ।
ಇಲ್ಲ ನಿನ್ನ ಸುಳಿವು । ಬಲ್ಲೆ ನಾನೆ ತಿಳಿವು ॥ ೬ ॥

ಸುಳ್ಳುಸುಳ್ಳೆ ನೀನು । ಹೊಳ್ಳ ಹಚ್ಚಿದೇನು ।
ಒಳ್ಳೆಯವನು ನಾನು । ಸುಳ್ಳುಬುರುಡಿ ನೀನು ॥ ೭ ॥

ಇದ್ದೂ ಇಲ್ಲ ನೀನು । ಇದ್ದೇ ಇರುವೆ ನಾನು ।
ಬಿದ್ದು ಬಿಟ್ಟಿ ನೀನು । ಗೆದ್ದು ಎದ್ದೆ ನಾನು ॥ ೮ ॥

ಜೊತೆಗಾರತಿ ಎಂದು । ಹಿತಚಿಂತಕಳೆಂದು ।
ಮತವಾಗಿತ್ತಂದು । ಯತಿಯಾಗಿಹೆನಿಂದು ॥ ೯ ॥

ಭೀರುಬುದ್ಧಿ ನೀನು । ಧೀರನಾತ್ಮ ನಾನು ।
ಸಾರಿ ಹೇಳುತಿಹನು । ಗುರು ನಾರಾಯಣನು ॥ ೧೦ ॥

**– ಶ್ರೀ ಶಂಕರ**

**ರಾ. ಭೂಪ** **೫೬** **ತಾ. ದೀಪಚಂದಿ**

ನಂಬಿ ಕೆಟ್ಟವರಿಲ್ಲವೊ । ಸದ್ಗುರುವಿನ ।
ನಂಬಿ ಕೆಟ್ಟವರಿಲ್ಲವೋ ॥
ನಂಬದೆ ಗುರುವಿನ ಜ್ಞಾನದ ಬೋಧವ ।
ಹುಂಬತನವ ಮಾಡಿ ಕೆಟ್ಟರೆ ಕೆಡಲಯ್ಯ ॥ ಪ ॥

ಬಾಳು ದುಃಖದ ಆಗರ । ಸ್ವರೂಪದಿ ಕೇಳಬೇಡೆಲೊ ದುಃಖವಾ ।
ಏಳು ಎಚ್ಚರಗೊಳ್ಳು । ಕೀಳುತನವ ಬಿಡು ।
ಹೇಳಿಕೊಡುವೆನೆಂಬ । ಗುರುವಿನ ನುಡಿಯನು ॥ ೧ ॥

ದೇಹಬುದ್ಧಿಯ ಬಿಡಿಸಿ । ವಿವೇಕದಿ । ದೇವಬುದ್ಧಿಯನಿರಿಸಿ ।
ಸೋಹಮೆಂಬುವ ಮಹಾಮಂತ್ರವ ಬೋಧಿಸಿ ।
ಮೋಹವನೋಡಿಸಿ । ಕಾಯುವ ಗುರುವಿನ ॥ ೨ ॥

ಪಂಚಕೋಶವ ಕಳಿಸಿ । ಸಂಚಿತ ಮೊದಲಾದ ಕರ್ಮವ ನೀಗಿಸಿ ।
ಹಂಚಿಕೆಯಿಂದಲಿ ಮುಕ್ತನ ಮಾಡುವ ।
ಪಂಚಕಸಾಕ್ಷಿ ಶ್ರೀಗುರುವಿನ ಬೋಧವ ॥ ೩ ॥

ತಾನೆ ದೇವನು ಎನ್ನುವಾ । ಪಾವನವಾದ । ಸ್ವಾನುಭವನೀಡುವಾ ।
ಏನೊಂದು ಬಯಸದೆ ಜ್ಞಾನದಾನವ ಮಾಳ್ಪ ।
ಜ್ಞಾನಿ ಶಂಕರಗುರುರಾಯನ ನುಡಿಯನು ॥ ೪ ॥

**– ದೇವ**

ರಾ. ದುರ್ಗಾ	೫೭	ತಾ. ಝಂಪಾ

ಇದ್ದ ಗೂಡನುಳಿದು ಮರುಳೆ ಎದ್ದು ಬಂದೆಯಾ ॥
ಇದ್ದುದನ್ನು ಮರೆತು ಬೇರೆ ಸುದ್ದಿ ತಂದೆಯಾ । ಮರುಳೆ ॥ ಪ ॥

ಗಟ್ಟಿಯಿದ್ದ ಗೂಡೊಳಿರದೆ ಬಿಟ್ಟು ಬರುವದೇ । ಮರುಳೇ ॥
ಕೆಟ್ಟು ಹೋಹ ಬೇರೆ ಗೂಡ ಕಟ್ಟುತಿರುವದೇ । ಮರುಳೆ ॥ ೧ ॥

ಸದ್ದುಸುಳಿಯದಿದ್ದ ಸ್ಥಿತಿಯು ಸಪ್ಪಗೆನಿಸಿತೇ । ಮರುಳೆ ॥
ಗುದ್ದು ತಿಂಬ ಗದ್ದಲದಲಿ ರುಚಿಯು ತೋರಿತೇ । ಮರುಳೆ ॥ ೨ ॥

ಜೋಡು ಸುಖದ ಬೀಡು ಎಂದು ಕಿಲಿಕಿಲಿಸುತಲೀ । ಮರುಳೆ ॥
ಜೋಡುಗೊಂಡೆ ಆಯ್ತೆ ಸುಖವು ನಿನ್ನ ಮನದಲೀ । ಮರುಳೆ ॥ ೩ ॥

ಪ್ರೇಮ ಪ್ರೇಮವೆಂದು ಕಡೆಗೆ ಕಾಮಿಯಾದೆಲಾ । ಮರುಳೆ ॥
ಕಾಮರಹಿತ ಪ್ರೇಮವನ್ನು ಕಾಣದಾದೆಲಾ । ಮರುಳೆ ॥ ೪ ॥

ಒಡಲಬಡಕತನವ ಬಿಡದೆ ಚಡಪಡಿಸಿದರೂ । ಮರುಳೆ ॥
ಪಡೆವ ಬಯಕೆ ಪೂರ್ಣವಾಯ್ತೆ ದುಡಿಯುತಿದ್ದರೂ । ಮರುಳೆ ॥ ೫ ॥

ಕೊಡಲಿಯಡಗಿ ಗಿಡದ ಬುಡವ ಕುಡಿಯುತಿರುವದು । ಮರುಳೆ ॥
ಗಡನೆ ಗೂಡಬಿಟ್ಟು ಬಟ್ಟಬಯಲೊಳಿರುವುದು । ಮರುಳೆ ॥ ೬ ॥

ಹುಟ್ಟಿ ಹುಟ್ಟಿ ಸಾವ ಗೂಡ ಬಿಟ್ಟು ಬಿಡುವದು । ಮರುಳೆ ॥
ಶ್ರೇಷ್ಠ ನಾರಾಯಣನ ಪದವ ಮುಟ್ಟಿ ಭಜಿಪುದು । ಮರುಳೆ ॥ ೭ ॥

– ಶ್ರೀ ಶಂಕರ

ರಾ. ಪಹಾಡಿ	೫೮	ತಾ. ತ್ರಿವಟ

ಗಂಟೆ ಹೊಡೆಯುತಿದೆ ಕೇಳೆಲೋ ಮೂಢಾ ।
ಪಂಟು ಬಡಿಯುತ ಕೂಡಲುಬೇಡಾ ॥ ಪ ॥

ಶ್ರುತಿಶಿರಗಳ ಬೋಧದ ಈ ಗಂಟೆ ।
ಮತಿವಿಭ್ರಮೆಯ ಬಿಡಿಸುವ ಗಂಟೆ ॥
ಅತಿಮಾನವಸ್ಥಿತಿ ಸಾರುವ ಗಂಟೆ ।
ಕ್ಷಿತಿಯೊಳಗಿದುವೆ ಸಾರ್ಥಕ ಗಂಟೆ ॥ ೧ ॥

ಜೀವೇಶ್ವರರೈಕ್ಯದ ಘನ ಗಂಟೆ ।
ದೇವನೆ ನೀನೆಂದರುಹುವ ಗಂಟೆ ॥
ಸಾವಿನ ಸಂಕಟ ಕಳೆಯುವ ಗಂಟೆ ॥
ಕಿವಿಯಿದ್ದು ಕೇಳದೆ ಬಿಡುವವರುಂಟೇ? ॥ ೨ ॥

ತೋರಿಕೆ ಅನಿಸಿಕೆ ಪುಸಿ ಎಂಬ ಗಂಟೆ ।
ಪಾರಮಾರ್ಥ ಸತ್ಯದ ಸವಿ ಗಂಟೆ ॥
ಘೋರನಿದ್ರೆಯಿಂದೆಚ್ಚರಿಸುವ ಗಂಟೆ ।
ಗುರುಶಂಕರನಾ ಪ್ರವಚನ ಗಂಟೆ ॥ ೩ ॥

– ದೇವ

**ರಾ. ಮಾಂಡ** **೫೯** **ತಾ. ದಾದರಾ**

ದೇವನಾ । ದರುಶನಾ । ಜೀವನಾ । ಪಾವನಾ ॥
ಗುರುವಿನಾ । ಪ್ರವಚನಾ । ಸಾವಿನಾ । ನಾಶನಾ ॥ ಪ ॥

ಸ್ವಾತ್ಮದ ಜ್ಞಾನೋದಯ । ಜಗದಿ ಪೂರ್ಣ ನಿರ್ಭಯ ॥
ಬ್ರಹ್ಮಪದದ ತನುಮಯ । ತಾನೇ ಶುದ್ಧ ಚಿನುಮಯ ॥ ೧ ॥

ಜ್ಞಾನದ ಪೂರ್ಣಾನುಭವ । ನಿರ್ವಿಕಲ್ಪ ಸ್ಥಿತಿಯೆ ಶಿವಾ ॥
ನೀಗಿತು ಈ ದುರುಳ ಭವ । ಗುರುವಿತ್ತಾತ್ಮಾನುಭವ ॥ ೨ ॥

ಜೀವನ್ಮುಕುತಿ ಆನಂದ । ತಿಳಿಯೆ ನೀನೆ ಮುಕುಂದ ॥
ಅರಿತು ನೋಡು ಇದನೆಂದ । ಗುರುಶಂಕರನಾ ಕಂದಾ ॥ ೩ ॥

– ದೇವ

**ರಾ. ಉದಯ** **೬೦** **ತಾ. ಝಂಪಾ**

ಏಳೇಳು ಬಾಲಕನೆ ಅಜ್ಞಾನನಿದ್ರೆಯಿಂ ।
ಏಳು ತಿಳಿವಳಿಕೆ ಎಂಬ ಎಚ್ಚರವ ಹೊಂದುತಲಿ ॥ ಪ ॥

ಹಾಳು ಮಾಯೆಯು ಎಂಬ ಮೇಲುಮುಸುಕನು ತೆಗೆದು ।
ಕೀಳುಬಾಳುವೆಯೆಂಬ ಹಾಸಿಗೆಯ ಸುತ್ತುತಲಿ ॥

ಕೇಳು ಕಿವಿದೆರದೇಕಚಿತ್ತದಿಂ ಶ್ರುತಿಯೆಂಬ ।
ಕೋಳಿ ಕೂಗುತಲಿಹುದು 'ತತ್ವಮಸಿ' ಎಂದು ॥ ೧ ॥

ಬಿತ್ತರಿಸಿಹುದು ಮುಮುಕ್ಷುತ್ವ ಮುಂಬೆಳಗಾಗೆ ।
ಚಿತ್ತವೆನ್ನುವ ಕಮಲವರಳಿಹುದು ನೋಡೀಗ ॥
ಸುತ್ತಲಡಿಗಿದ ಸುವಾಸನೆಯ ಮೂಸುತಲಿ ನೀ ।
ಉತ್ತಮೋತ್ತುಮ ನಿಜಾನಂದವನು ಪಡೆವುದಕೆ ॥ ೨ ॥

ಜ್ಞಾನನಿಂದಕರೆಂಬ ಗೂಗೆಗಳು ಅಡಗಿದವು ।
ಕಾಣದಾದವು ಕುತರ್ಕಗಳೆಂಬ ತಾರೆಗಳು ॥
ಸ್ವಾನುಭವಸುಜ್ಞಾನಭಾನುವುದಯಿಸುತಿಹನು ।
ಜ್ಞಾನಿಶಂಕರನ ಸದ್ಬೋಧವನೆ ಸ್ಮರಿಸುತಲಿ ॥ ೩ ॥

– ದೇವ

**ರಾ. ದೇಸ** **೬೧** **ತಾ. ದಾದರಾ**

ಸುಗ್ಗಿ ಬಂದಿತು । ಸುಖದ । ಸುಗ್ಗಿ ಬಂದಿತು ।
ಬಗ್ಗಿ ಬಳಲುವವರ ಕಂಡು । ಹಿಗ್ಗ ನುಂಟುಮಾಡಲೆಂದು ॥ ಪ ॥

ಕಿಲಿಕಿಲಿಸುವ ಹಕ್ಕಿಪಕ್ಕಿ ।
ಬಳಗವನ್ನು ಕೂಡಿಕೊಂಡು ॥
ಬೆಳೆಗಳ ಕಾಣಿಕೆಯ ಕೊಂಡು ।
ಹೊಲದೊಡೆಯನು ನಲಿಯಲೆಂದು ॥ ೧ ॥

ಪಂಥಪಾಡುಗಳನು ಜಡಿದು ।
ಭ್ರಾಂತಿಮೂಲವನ್ನು ಕಡಿದು ॥
ಶಾಂತಿಬೀಜತೆನೆಯ ಹಿಡಿದು ।
ಸಂತೋಷದಿ ತಾನೆ ನಡೆದು ॥ ೨ ॥

ಮರವಿನ ಬರಗಾಲದಿಂದ ।
ನರಳುವವರ ಬಳಿಗೆ ನಿಂದ ॥
ಗುರು ನಾರಾಯಣನು ಚಂದ ।
ವರುಹಿ ಸುಖವ ನೀಡೆ ಬಂದ ॥ ೩ ॥

– ಶ್ರೀ ಶಂಕರ

ರಾ. ಪಿಲು | ೬೨ | ತಾ. ಕೇರವಾ

ದೇಹಗೇಹದೊಳಗಾತ್ಮದೇವನಾ ಪೂಜೆಯು ನಡೆದಿಹುದು ।
ಸ್ನೇಹಪೂರದಿ ಕಣ್ಣು ಹಣತೆ ನೆರೆತುಂಬಿ ತುಳುಕುತಿಹುದು ॥ ಪ ॥

ಬಗೆ ಎಳೆಬತ್ತಿಗೆ ಜ್ಞಾನದೀಪವು ಹತ್ತಿ ಹೊತ್ತುತಿಹುದು ।
ಬಗೆಬಗೆ ಬಣ್ಣದಿ ಜಗವನು ಬೆಳಗುತ ಬೆಳಗೊಡಲಾಗಿಹುದು ॥ ೧ ॥

ಸ್ನಾನವು ವಸ್ತ್ರವು ಗಂಧ ವಿಭೂತಿ ಕುಂಕುಮ ಪುಷ್ಪಗಳು ।
ನಾನಾ ನೈವೇದ್ಯವು ತಾಂಬೂಲಾ ಪರಿಮಳ ದ್ರವ್ಯಗಳು ॥ ೨ ॥

ದ್ರವ್ಯಭೋಗದಿಂದೊಲಿವನು ನಲಿವನು ಹೊಗಳಲು ಹಿಗ್ಗುವನು ।
ದಿವ್ಯಭಾವಬಲದಿಂ ಕೆಲಹೊತ್ತು ಸಮಾಧಿಯೊಳಿರುತಿಹನು ॥ ೩ ॥

ಅಗಣಿತಮಹಿಮ ಪರಾತ್ಮನು ಜೀವನ ವೇಷವ ತೊಟ್ಟಿಹನು ।
ಬಗೆಯದೆ ಮನುಜನು ವೇಷವ ನೋಡಿಯೆ ಮೋಸಹೋಗುತಿಹನು ॥ ೪ ॥

ಪೂಜೆಗೊಳ್ಳುತಿಂತಾತ್ಮನು ಜಗದಲಿ ವ್ಯವಹರಿಸುತ್ತಿಹನು ।
ಸೋಜಿಗವಾದರೂ ಸುಳ್ಳೇನಲ್ಲ ಮೋಜು ಮಾಡುತಿಹನು ॥ ೫ ॥

ಅರಿತರೆ ದೇವನು ಮರೆತರೆ ಜೀವನು ಯಾವನ ಮಹಿಮೆಯಿದು ।
ಅರಿತರೆ ಪೂಜೆಯು ಮರೆತರೆ ಪೂಜೆಯು ಅವನದೆ
ಮಹಿಮೆಯದು ॥ ೬ ॥

ಒಡಲ ಗುಡಿಯೊಳು ಜೀವದೇವನು ಬೆಡಗಿನೊಳಿರುತಿಹನು ।
ಒಡಬಡುವನು ನಾರಾಯಣನಡಿಗಳ ಕೃಪೆಯನು ಪಡೆದವನು ॥ ೭ ॥

– ಶ್ರೀ ಶಂಕರ

ರಾ. ದುರ್ಗಾ | ೬೩ | ತಾ. ಝಂಪಾ

ಆವ ದೈವವು ನೋಡೊ ದೇವಮಾಂತ್ರಿಕನೆ ।
ಜೀವಭಾವದೊಳೆನ್ನ ಬಡಿದುಕೊಂಡಿಹುದು ॥ ಪ ॥

ದೇಹದೊಳಗಿರುತಿಹುದು ದೇಹ ತಾನೆನುತಿಹುದು ।
ಬಾಹ್ಯ ವಿಷಯಗಳೆಲ್ಲ ನನ್ನವೆನ್ನುವದು ॥

ಸೋಹಮೆಂಬುವ ಮಂತ್ರ ಕಿವಿಯಲ್ಲಿ ಬೀಳಲ್ಕೆ।
ಹಾಹಾ ! ಎನುತ್ತಲಿ ಹೌಹಾರುತಿಹುದು ॥ ೧ ॥

ಕರ್ಮಾಕರ್ಮವೆನುತ್ತ ಧರ್ಮ ಧರ್ಮವೆನುತ್ತ।
ಕರ್ಮಿಯಾಗಿರುತಿಹುದು ಮರ್ಮವರಿಯದಲೆ ॥
ನಿರ್ಮಲನು ನೀನೆಂಬ ನಿಗಮೋಕ್ತಿಯನು ಕೇಳಿ।
ದುರ್ಮತಿಯಬಲವಿಡಿಯುತಲ್ಲವೆನ್ನುವದು ॥ ೨ ॥

ನಂಬಿಹುದು ದೇಹವನು ನಂಬದಲೆ ನಿನ್ನನ್ನು।
ಹಂಬಲಿಸುತಿರುವದೈ ಹಗಲೆಲ್ಲ ಸುಖಕೆ ॥
ಹುಂಬತನ ಮಾಡುವುದು ಜಂಬದಿಂ ಕೂಡಿಹುದು।
ಸಂಬಳವ ಬಯಸುವದು ಕಂಬ ಸುತ್ತುತಲಿ ॥ ೩ ॥

ಹಲವುತರ ಸೋಗುಗಳ ಹಾಕುತ್ತಲಿರುತಿಹುದು।
ಹಲವುತರ ಮಾತುಗಳನಾಡುತ್ತಲಿಹುದು ॥
ಹಲವುತರದಭಿನಯವ ಮಾಡುತ್ತ ಪಾಡುತ್ತ।
ನಲಿದೊಲಿದು ಕುಣಿಯುವದು ಭವರಂಗದೊಳಗೆ ॥ ೪ ॥

ಆಡುತ್ತಲಿಹುದೊಂದು ಮಾಡುವದು ಮತ್ತೊಂದು।
ಬೇಡುತ್ತಲಿಹುದೊಂದು ಕೂಡುತಿಹುದೊಂದು ॥
ಕಾಡುತ್ತ ಬೇಡುತ್ತ ಪೀಡೆಯನು ಮಾಡುತಿಹ।
ಖೋಡಿದೆವ್ವದ ಚೇಷ್ಟೆ ಎಂತು ವರ್ಣಿಸಲಿ ॥ ೫ ॥

ತಲೆಯ ಬೆಳೆಸುವದೊಮ್ಮೆ ತಲೆಬೋಳಿಸುವದೊಮ್ಮೆ।
ನೆಲವಾಸಿಗೊಮ್ಮೆ ಪರ್ಯಂಕವೊಮ್ಮೆ ॥
ಕುಲವನರಸುವದೊಮ್ಮೆ ಹೊಲೆಯ ಕಲೆಸುವದೊಮ್ಮೆ
ನಿಲಯವಾಸವದೊಮ್ಮೆ ವನವಾಸವೊಮ್ಮೆ ॥ ೬ ॥

ಬಲ್ಲೆ ನೆಲ್ಲವನೆಂದು ಗುಲ್ಲು ಮಾಡುತ್ತಿಹುದು।
ಬಲ್ಲ ತನ್ನನುಭವವನಲ್ಲಗಳೆಯುವದು ॥
ಸೊಲ್ಲುಸೊಲ್ಲಿಗೆ ನಾನು ನಾನು ನಾನೆಂದೆನುತ।
ನಿಲ್ಲದಲೆ ಒಂದೆಡೆಗೆ ನೆಗೆದಾಡುತಿಹುದು ॥ ೭ ॥

ಹೀಗಿರುವ ದೆವ್ವದಾ ಗೆಳತನದಿ ಹಿರಿದೆವ್ವ।
ವಾಗಿಹೆನು ದೆವ್ವದಲಿ ಮನವನಿರಿಸಿ ॥
ಶ್ರೀ ಗುರುವೆ ಬಿಡಿಸೆನಗೆ ಬಡಿದಿರ್ದ ದೆವ್ವವನು।
ಬಾಗುವೆನು ನಿನ್ನಡಿಗೆ ನಾರಾಯಣ ॥ ೮ ॥

– **ಶ್ರೀ ಶಂಕರ**

**ರಾ. ಪಿಲು** **೬೪** **ತಾ. ಕವಾಲಿ**

ಓದೀಯೇನೊ ಇಂದಿನ ಬಿಸಿಬಿಸೀ ಸುದ್ದಿಯಾ।
ಹಾದೀ ಹಿಡಿದು ಹೋಗುವಾಗ ಕೇಳುತಿದ್ದುದಾ ॥ ಪ ॥

ಅಂಬಿಗನೊಬ್ಬನಿದ್ದಾನಂತೆ ಮುಂದಾಳಿಹನಂತೆ। ಒಳ್ಳೆ।
ಹಂಬಲಿಕೆಯ ಸಲಿಸುವನಂತೆ ಹಾಯಾಗಿಹನಂತೆ ॥ ೧ ॥

ಒಡಲಿಲ್ಲದ ಬೆಡಗಿನವನು ಕಡಲೊಳಿಹನಂತೆ। ಅವನು।
ಹಿಡಿವ ಬಿಡುವ ಬಗೆಬೆಲೆ ಕೊಡಲು ಕಡೆ ಹಾಯ್ಸುವಂತೆ ॥ ೨ ॥

ಹುಟ್ಟು ಹಿಡಿದಿಹನಂತೆ ಎಂದೂ ಹುಟ್ಟಿಲ್ಲವಂತೆ। ಅವನು।
ಗುಟ್ಟನರಿತವನಂತೆ ಅಂಗೀ ತೊಟ್ಟಿಲ್ಲವಂತೆ ॥ ೩ ॥

ದಿಕ್ಕು ತೋರುತಲಿರುವ ಯಂತ್ರ ಅವನಲ್ಲಿದೆಯಂತೆ। ಉತ್ತರ।
ದಿಕ್ಕುಗೆಡಿಸುವನಲ್ಲವಂತೆ ತಕ್ಕವನಿಹನಂತೆ ॥ ೪ ॥

ಅವನ ನಾವೆಗೆ ತೊಗಲಿನ ಹೊದಿಕೆ ಇರುವದಂತೆ। ಕೇಳೊ।
ಅದರೊಳಗೆಲ್ಲ ರಕುತ ಖಂಡ ಎಲವುಗಳಂತೆ ॥ ೫ ॥

ನರದ ದಾರದಿ ಒಳಹೊಲಿಗೆಯ ಹಾಕಿರುವದಂತೆ। ಅದಕೆ।
ಬರಿಯ ಯಂತ್ರವಂತೆ ಲೋಕಕ್ಕರಿದಾಗಿಹುದಂತೆ ॥ ೬ ॥

ಕಳೆದುಹೋದ ಸ್ವರಾಜ್ಯವ ಗಳಿಸಿರುವನಂತೆ। ಮೊದಲು।
ಬಳಲುತಿರ್ಪ ಬಡವರಿಗೆ ಕೊಡುಗೈ ದೊರೆಯಂತೆ ॥ ೭ ॥

ನೊಂದು ಬೆಂದ ಬಗೆಗೆ ಶ್ರೀಗಂಧದ ಚಳಿಯಂತೆ। ತಾಪದಿ।
ಅಂದು ಇಂದು ಮುಂದು ಅವನೇ ಅವನಾಗಿಹನಂತೆ ॥ ೮ ॥

ಮೂರವಸ್ಥೆಗಳನು ಮೀರಿ ಬೇರೆ ಇಹನಂತೆ । ಅವನು ।
ತೋರದಿದ್ದ ಊರನಿಲ್ಲೇ ತೋರಿಸುವನಂತೆ ॥ ೯ ॥

ನುಡಿಯಿಲ್ಲದ ನಿಸ್ಸೀಮ ಗ್ರಾಮಕೆ ಹೋಗುತಿಹನಂತೆ । ಅವನು ।
ಗುಡಿ ಇಲ್ಲದ ದೇವರಂತೆ ನಡೆದಾಡುವನಂತೆ ॥ ೧೦ ॥

ಗೀತಾಸಂಗೀತದಿ ಮನವ ಮೋಹಿಸುವನಂತೆ । ಭಗವತ್ ।
ಆತನಿದ್ದ ಸ್ಥಳವೇ ಪುಣ್ಯಕ್ಷೇತ್ರವಂತೆ ॥ ೧೧ ॥

ಓಡಿ ಬಂದವರನ್ನು ನೋಡಿ ಕೂಡಿಸುವನಂತೆ । ಬಿಡದೇ ।
ಹಾಡಿ ಹಾಡಿ ಹುಟ್ಟಗಡಿದು ಮುಟ್ಟಿಸುವನಂತೆ ॥ ೧೨ ॥

ಶರಣೆಂಬರ ಜರೆಮರಣಗಳನ್ನು ಪರಿಹರಿಸುವನಂತೆ ಮರಣ ।
ಪರಮಾನಂದವನೀಯುವ ಸದ್ಗುರುನಾರಾಯಣನಂತೆ ॥ ೧೩ ॥

– ಶ್ರೀ ಶಂಕರ

**ರಾ. ಭೈರವಿ** **೬೫** **ತಾ. ಕವಾಲಿ**

(ಚಾಲ – ರಂಜಿಸಲೇ ರಜನಿ ಎಂಬಂತೆ)

ಬನ್ನವನಾ ನೀಗಿದೆ । ಜವದಿ ।
ಧನ್ಯನಾದೆ । ಶ್ರೀ ಗುರುವೆ । ಧನ್ಯನಾದೆ ।
ಸದ್ಗುರುವೇ ಧನ್ಯನಾದೆ ॥ ಪ ॥

ಭವಸಾಗರವಾ । ದಾಂಟಿದೆ ।
ಜವನ ಬಾಧೆಯ । ನೀಗಿದೆ ॥
ಜೀವಭಾವವು । ಸಟೆಯೆಂದೆನಿಸಿ ।
ದೇವನಾದೆ । ಪಾವನನೆ । ಧನ್ಯನಾದೆ ॥ ೧ ॥

ಅರಿತೆನೆನ್ನಯ । ನಿಜರೂಪವನಾ ।
ದುರಿತವ ನೀಗಿದೆ । ಅರಿವಿನ ಬಲದಿ ॥
ದೊರಕಿತು ಮುಕುತಿ । ಧನ್ಯನಹುದು ನಾ ।
ನೀನೆ ನಾನ್ಯೆ । ಶಂಕರನೇ ಧನ್ಯನಾದೆ ॥ ೨ ॥

– ದೇವ

ರಾ. ಮಿ. ಪಿಲು **೬೬** ತಾ. ಕವಾಲಿ

(ಚಾಲ – ರುಕುನ ಸಕೋತೋ ಜಾವೋ ತುಮ ಜಾವೋ ಎಂಬಂತೆ)

ಮನುಜಶರೀರವು ವರವೊ। ದುರ್ಲಭವೊ ॥ ಪ ॥

ಭವಸಾಗರವನು ದಾಂಟಲು ನೌಕೆಯಿದೊ।
ಭವಬಾಧೆಯ ನೀಗಲು ಇದು ಸಾಧನವೊ॥
ಪಾವನಸ್ವರೂಪಜ್ಞಾನವನರಿಯಲು।
ದೇವನೆ ತಾನೆನಿಸುವನೊ। ಆ ನರನು ॥ ೧ ॥

ತಿಳಿ ನೀನೀಗಲೆ ನಾನಾರೆಂಬುದ ಮನುಜಾ।
ಅಳಿವೀ ದೇಹದೊಳೇ ತಿಳಿಯಲುಬಹುದಿದನಾ॥
ಉಳಿದ ದೇಹಗಳು ಹಲವಾರಿರುತಿರೆ।
ಫಲವೇನೈ ತಿಳಿವಿರದೇ ತಿಳಿ ಭರದೇ ॥ ೨ ॥

ಪಾಪಿಜನ್ಮವು ಎಂದು ಶಪಿಸಲು ಬೇಡಾ।
ತಾಪನೀಗಲು ಇದೇ ದಾರಿಯೈ ನೋಡಾ॥
ಆ ಪರವಸ್ತುವೆ ತಾನಿಹೆನೆಂಬ।
ತಾಪಸ ಶಂಕರನಡಿಯೇ। ಭವ ಕಡಿಯೇ ॥ ೩ ॥

**– ದೇವ**

ರಾ. ಸಾರಂಗ **೬೭** ತಾ. ದಾದರಾ

ಸವಿದು ನೋಡೆಲೊ। ಸುಧೆಯ। ಸವಿದು ನೋಡೆಲೊ।
ಕಿವಿಯ ಬಟ್ಟಲಲ್ಲಿ ಸುರಿದು। ಸುವಿಚಾರದ ಬಾಯತೆರೆದು ॥ ಪ ॥

ಸುಮತಿಯೊಡನೆ ಸಲಿಗೆಗೂಡಿ।
ಸುಮಧುರ ಸಲ್ಲಾಪಮಾಡಿ॥
ಶಮೆಯ ಗೀತೆಗಳನು ಪಾಡಿ।
ಸಮತೆಯಿಂದ ಸರಸವಾಡಿ ॥ ೧ ॥

ರಾಗದಿಂದ ತ್ಯಕ್ತನಾಗಿ।
ಭೋಗದಿಂದ ಮುಕ್ತನಾಗಿ॥

ಯೋಗದಿಂದ ಯುಕ್ತನಾಗಿ ।
ತ್ಯಾಗದಿಂದ ಸಕ್ತನಾಗಿ ॥ ೨ ॥

ತರತರಬಯಕೆಗಳ ಕಳೆದು ।
ಅರಿವೊಂದೆಂಬುದನು ತಳೆದು ॥
ಎರಡೆಂಬುವ ಬಗೆಯನಳಿದು ।
ಗುರುನಾರಾಯಣನ ತಿಳಿದು ॥ ೩ ॥

– ಶ್ರೀ ಶಂಕರ

## ೬೮

**ರಾ. ಮಾಲಕಂಸ** **ತಾ. ತ್ರಿವಟ**

ಇದುವೇ ಸಂಧ್ಯಾಕಾಲವು ।
ಹುದುವಿನ ವಿಶ್ವದ ಕೀಲವು ॥ ಪ ॥

ಮೋದವೆಂಬ ಹಗಲಿನ ಬೆಳಕಿಲ್ಲದ ।
ಖೇದವೆಂಬಿರುಳ ಕತ್ತಲೆಗವಿಯದ ॥
ಭೇದಭಾವದಾ ಜನ್ಮವು ತೋರದ ।
ಆಧಿವ್ಯಾಧಿ ಮೃತ್ಯುವು ಮೈದೋರದ ॥ ೧ ॥

ಭೂಮಿವ್ಯೋಮಪಾತಾಳವ ಮೀರಿದ ।
ಕಾಮಕ್ರೋಧಕುಲವೆಲ್ಲವು ಜಾರಿದ ॥
ನಾಮರೂಪಗಳು ಗೂಡನು ಸೇರಿದ ।
ಸಾಮರಸ್ಯವೃಕ್ಷವು ಬೇರೂರಿದ ॥ ೨ ॥

ಎರಡು ಕಲ್ಪನೆಯ ನಡುವಾಗಿರುವಾ ।
ಎರಡವಸ್ಥೆಗಳ ಬಿಡುವಾಗಿರುವಾ ॥
ಮರವಿನ ನಿದ್ದೆಯ ಹೊದ್ದದಲಿರುವಾ ।
ಗುರುನಾರಾಯಣ ತಾನಾಗಿರುವಾ ॥ ೩ ॥

– ಶ್ರೀ ಶಂಕರ

## ೬೯

**ರಾ. ಪಿಲು** **ತಾ. ಕವಾಲಿ**

ನೋಡೀಯೇನೋ ತಣಿವಿನ ತೌರೂರಾದ ತೋಟವ ।
ನೋಡಿ ಪಾಡಿ ನಲಿದು ಕೂಡಿ ಮಾಡೋ ಊಟವ । ನೀನು ॥ ಪ ॥

ನೆಲದಲಿ ಹುಟ್ಟುವದಲ್ಲ ನೀರಲಿ ಬೆಳೆಯುವದೇನಲ್ಲ ।
ಸುಳಿವ ಗಾಳಿಯ ಗರಿಯಲಿ ಶಿಲುಕಿ ಅಲುಗಾಡುವದಲ್ಲ । ನೀನು ॥ ೧ ॥

ಪೊಳ್ಳಿನಲ್ಲಿ ಅಡಗುವದಲ್ಲ ಕೊಳ್ಳಿಯ ಭಯವಿಲ್ಲ । ಎಂದೂ ।
ಮುಳ್ಳಿನ ಬೇಲಿಯಿಲ್ಲ ಹಬ್ಬುವ ಬಳ್ಳಿಗಳೊಂದಿಲ್ಲ ॥ ೨ ॥

ಕೆಸರಾಗಿಲ್ಲ ಕಾಲಿನ ಕೆಳಗೆ ಹಸರು ಮೇಲಿಲ್ಲ । ಅಲ್ಲಿ ।
ಹೆಸರು ತೋರಿಕೆ ಇಲ್ಲದೆ ತಾನೆ ಪಸರಿಸಿಹುದಲ್ಲ ॥ ೩ ॥

ವಾಸನೆಹೂವು ಆಶೆಯ ಮಿಡಿಯು ನಾಶದ ಕಾಯಿಲ್ಲ ।
ಹೇಸಿಕೆ ಭೋಗದ ಫಲಗಳ ಬಯಸುವ ಆಶೆಬುರುಕರಿಲ್ಲ ॥ ೪ ॥

ಜಡಭಾವದ ಗಿಡಬಳ್ಳಿಯ ಮದುವೆಯ ಹಂದರಹಾಕಿಲ್ಲ ।
ಹುಡುಗಾಟದ ಶೋಭನ ಗುಂಜಾರವದಳಿಗಳ ಸುಳಿವಿಲ್ಲ ॥ ೫ ॥

ಟೊಂಗೆ ಟೊಂಗೆಯಲಿ ಜಿಗಿಜಿಗಿದಾಡುವ ಮಂಗಗಳೊಂದಿಲ್ಲ ।
ತಿಂಗಳ ನೇಸರ ಬೆಳ್ಳಿಯ ಬೆಳಕಿನ ಹಂಗೇನದಕಿಲ್ಲ ॥ ೬ ॥

ಮಡಿ ಎನ್ನುವ ಮಡಿ ಮಾಡಿಲ್ಲ ಕುಡಿ ಎನ್ನುವ ಕುಡಿಯ ।
ಹೊಡೆ ಎನ್ನುವ ಹೊಡೆಗಳ ಹಾಕಿಲ್ಲ ನುಡಿಯಲ್ಕರಿದಾದ ॥ ೭ ॥

ಹೊರ ನೋಟಕೆ ಹೂಹಣ್ಣಿನ ತೋಟ ಒಳನೋಟಕೆ ಮಾಟ ।
ಒರೆಯಲಿ ಹುದುಗಿದ ಖಡ್ಗದ ನೋಟ ನಾರಾಯಣನಾಟ ॥ ೮ ॥

**– ಶ್ರೀ ಶಂಕರ**

## ೭೦

**ರಾ. ಚಾಂದ** **ತಾ. ದಾದರಾ**

ಅಳುವು ಬರುತಿದೆ । ಎನಗೆ ಅಳುವು ಬರುತಿದೆ ।
ಅಳುವು ಮೀರಿ ತಿಳಿವುಗೆಟ್ಟು । ಬಳಲುತಿರುವ ಜನರ ಕಂಡು ॥ ಪ ॥

ಕಲಿಯ ಮಹಿಮೆ ದೇವರಿಲ್ಲ । ತಿಳಿದ ಮಹಿಮರಿಲ್ಲೇ ಇಲ್ಲ ॥
ಕಳೆವೆವೆಂತೊ ಕಾಲವೆಂದು । ಗಳಹುವ ಗಾವಿಲರ ಕಂಡು ॥ ೧ ॥

ಹೀಗೆ ಮಾಡಬೇಕು ಮತ್ತೆ ಹಾಗೆ । ನಡೆಯಬೇಕೆನುತ್ತೆ ॥
ಹೇಗೊ ಹೇಗೊ ಮಾತನಾಡಿ । ಹೋಗಿಬರುವ ಜನರ ನೋಡಿ ॥ ೨ ॥

ಒಡಲು ಮಿಥ್ಯವೆಂದು ನುಡಿದು । ನುಡಿಯು ಸತ್ಯವೆಂದು ಬಗೆದು ॥
ತೊಡರ ಬಡರ ಮಾತನಾಡಿ । ಚಡಪಡಿಸುವ ಜನರ ನೋಡಿ ॥ ೩ ॥

ನಿಜವ ತಿಳಿಯುವಿಚ್ಛೆ ಇರದೆ । ಸುಜನಸಂಗ ಮನಕೆ ತರದೆ ॥
ಕುಜನರನ್ನು ಕೂಡಿಕೊಂಡು । ಗುಜುಗುಜು ಮಾಡುವವರ ಕಂಡು ॥ ೪ ॥

ಕನಸಿನಂತೆ ಜಗವಿದೆಂದು । ಚಿನುಮಯಾತ್ಮ ನಿತ್ಯನೆಂದು
ಅನುಭವಕ್ಕೆ ತಂದುಕೊಂಡು । ಧನ್ಯರಾಗದವರ ಕಂಡು ॥ ೫ ॥

ಮೂರವಸ್ಥೆಗಾಚೆಗಿರುವ । ಪಾರಮಾರ್ಥತಾನೆ ಎನುವ ॥
ನಾರಾಯಣ ಬೋಧದಿಂದ । ಪಾರಾಗದ ಜನರ ಕಂಡು ॥ ೬ ॥

**– ಶ್ರೀ ಶಂಕರ**

## ೭೧

**ರಾ. ಜೈ ಜೈವಂತಿ** **ತಾ. ದಾದರಾ**

ಹುಟ್ಟುಗಡಿಯುವೆ । ಬಿಡದೆ । ಹುಟ್ಟುಗಡಿಯುವೆ ।
ಎಟ್ಟಿ ಹೊಳೆಯ ನೆಲೆಯನರಿತು ।
ಹೊಟ್ಟೆಹೊರೆವ ಗುಟ್ಟನರಿತು ॥ ಪ ॥

ತುಂಬಿ ಹರಿವ ಗಂಗೆಯಲ್ಲಿ ।
ಅಂಬಿಗನಾ ಬಂದೆನಿಲ್ಲಿ ॥
ನಂಬಿ ಬರಲು ನಾವಿನಲ್ಲಿ ।
ಇಂಬನಿತ್ತು ಸಂಭ್ರಮದಲಿ ॥ ೧ ॥

ಸೆಳವಿನಲ್ಲಿ ಮುಳುಗಿಸದಲೆ ।
ಸುಳಿಗಳಲ್ಲಿ ಶಿಲುಕಿಸಿದಲೆ ॥
ಶಿಲೆಗೆ ನಾವ ತಾಗಿಸಿದಲೆ ।
ಹೊಲೆಮುಟ್ಟನು ತಗಲಿಸದಲೆ ॥ ೨ ॥

ಮರವಿನ ತೆರೆಗಳನು ಸರಿಸಿ ।
ಅರಿವಿನಲ್ಲಿ ಬಗೆಯನಿರಿಸಿ ॥
ಸರಳ ದಾರಿ ಹಿಡಿದು ಚರಿಸಿ ।
ಗುರುನಾರಾಯಣನ ಸ್ಮರಿಸಿ ॥ ೩ ॥

**– ಶ್ರೀ ಶಂಕರ**

## ೭೨

**ರಾ. ಭೀಮಪಲಾಸ** **ತಾ. ತ್ರಿವಟ**

(ಚಾಲ – ಬೀನಾ ಮಧುರ ಮಧುರ ಕಚು ಬೋಲ್ ಎಂಬಂತೆ)

ಜೀವಾ । ತಿಳಿ ತಿಳಿ ನಿಜದರಿವಾ ॥ ಪ ॥

ಶಾಂತಮಯಾ । ಆನಂದನಿಕಾಯ ।
ಮನಸಿನ । ಮೂಲದಾ । ಘನಪದವಾ ॥ ಅ.ಪ. ॥

ಕಲ್ಪನಾಜಾಲದಾ । ನಾಶದ ಸ್ಥಿತಿಯೇ ।
ಪರಮಸೌಖ್ಯದಾ । ನಿಧಿಯದು ನೀನೇ ॥
ಮನದಲಿ । ಯೋಚಿಸಿ । ತಿಳಿ ನಿನ್ನಾ ॥ ೧ ॥

ಜನನಮರಣದಾ । ಸಂಕಲೆ ಹರಿಯೋ ।
ಘನವಿವೇಕದಾ । ಬಲದಲಿ । ತಿಳಿಯೋ ॥
ಸನ್ನುತ ಶಂಕರಗುರುಬೋಧಾ ॥ ೨ ॥

**– ದೇವಾ**

## ೭೩

**ರಾ. ಶುದ್ಧ ಕಲ್ಯಾಣ** **ತಾ. ದಾದರಾ**

(ಚಾಲ – ನಾಡಗುಡಿಯನೇರಿಸುವ ಎಂಬಂತೆ)

ನೋಡು ನೋಡು । ಜೀವನೆ ನೀ । ನಿನ್ನಯ ನಿಜರೂಪವಾ ।
ತಿಳಿದು ನಲಿದು ಜ್ಞಾನಪಥದಿ । ಆನಂದವ ಹೊಂದು ನೀ ॥ ಪ ॥

ಅಮರನಾದ ಆತ್ಮ ನೀನು । ಆನಂದದ ನಿಧಿಯೇ ನೀ ।
ಅರಿತು ಇದನು ನಿನ್ನ ಮನದಿ । ಶಾಂತರೂಪನಾಗು ನೀ ॥ ೧ ॥

ನಾನೆನ್ನುವ ಅನಿಸಿಕೆಯದು । ಅಡಗಲು ತಾನುಳಿಯುವಾ ।
ತೋರಿಕೆಯನು ಮೀರಿದಾ । ನಿರ್ವಿಕಲ್ಪ ನೋಡು ನೀ ॥
ಶ್ರವಣ ಮನನ ನಿದಿಧ್ಯಾಸ । ಸಾಧನೆಗಳ ಮಾಡುತಾ ।
ತಿಳಿವುದಾತ್ಮರೂಪ ನಾನೆ । ಎಂದು ನಿನ್ನ ಮನದಲಿ ॥ ೨ ॥

ಮನದೊಳಗೀಪರಿಯಾ । ದೃಢತರದಲಿ ನಿಶ್ಚಿತಮಾಡೀ ।
ದೇಹ ಮನಸು ಬುದ್ಧಿಗಳಿವು । ನಾನಲ್ಲೆಂದರಿಯುತ ॥
ತೋರಿ ಅಡಗುತಿರುವ ಜಗವು । ಕನಸೇ ಎಂದರಿತು ನೀ ।
ಪರಮಸತ್ಯ ಆತ್ಮರೂಪ ನಾನಿಹೆನೆಂದರಿತುಕೋ ॥ ೩ ॥

ಪ್ರೇಮರೂಪ ನೀನೆ ಎಂದು । ಸಾರಿ ಪೇಳ್ದ ಜ್ಞಾನವ ।
ಆ ಮಹಾತ್ಮ ಶಂಕರಗುರುರಾಜನ ನುಡಿ ತಿಳಿಯೋ ನೀ ॥ ೪ ॥

**– ದೇವ**

## ೭೪

### (ಚಾಲ : ಪಪೀಹಾರೇ ಎಂಬಂತೆ)

ತಿಳೀಮನವೇ । ತಿಳೀಮನವೇ । ತಿಳೀಮನವೇ ।
ತಿಳಿ ಸಂಪೂರ್ಣ ಸುಖತಾಣಾ । ತಿಳಿ ಸಂಪೂರ್ಣ ಸುಖತಾಣಾ ।
ಸಾವಿನ ಬಾಧೆಯ ನೀಗುವಿ । ನಿಜವಾಗೀ । ಸಾವಿನ ಬಾಧಾ ।
ಭಾವಾತೀತನ ನೀ । ತಿಳೀಮನವೇ ॥ ಪ ॥

ನೋಡು ನೀನೇ ಆತ್ಮಸ್ವರೂಪಾ । ಪೇಳಿದ ಗುರುಭೂಪಾ ।
ಪೇಳ್ದ ಗುರುಭೂಪಾ । ದೂಡು ದೇಹಾದಿಗಳ ತಾಪಾ ॥
ನೋಡುನಿಜರೂಪಾ । ನೀ । ನುಡಿಮನಗಳಿಗೂ ಕಡೆಯಾಗಿರುವ ।
ಅಡಗಿದ ಗೂಢವಿದು । ತಿಳೀಮನವೇ ॥ ೧ ॥

ಕರ್ಮ ಪಾಶಕೆ ಕಠಾರಿಯಿದು ಜ್ಞಾನಾ ।
ಮರ್ಮವಿದು ಘನಶಾಂತಿಯಾ ಸ್ಥಾನಾ ।
ಧರ್ಮಾಧರ್ಮವ ಮೀರಿಹ ತಾಣ ।
ದುರ್ಮತಿಯಾ ಬಿಡು ಜಾಣಾ ।
ಘೋರತರದ ಸಂಸಾರದ ನಾಶಾ ।
ಪೂರಣಗೊಂಬುದು ಆಶಾ ।
ಪರಾಶಾಂತಿಗಿನ್ನೊಂದನು ಕಾಣೆ ।
ಗುರುಶಂಕರನಾಣೇ । ಗುರುಶಂಕರನಾಣೇ । ತಿಳೀಮನವೇ ॥ ೨ ॥

**– ದೇವ**

## ೭೫

**ರಾ. ಮಾಂಡ** **ತಾ. ತ್ರಿವಟ**

**(ಚಾಲ – ಭಾವಜ ರೂಪಾ ಎಂಬಂತೆ)**

ಆಲಿಸು ಮನುಜಾ । ಮಾಯಾಕಾರ್ಯಕೆ ।
ಮೋಸಹೋಗಲು ಬೇಡಾ । ವಿಚಾರಿಸು ।
ತೋರಿಕೆಯು ಪುಸಿಯಹುದು । ಈ ॥ ಪ ॥

ಜಗದೊಳು ತೋರುವ ಅಘಟಿತಘಟನೆ ।
ಮಿಗಿಲೆನಿಸುತಲಿಹುದೋ ಗಡಾ ॥
ಅಘಟಿತಘಟನೆಯೆ ಜ್ಞಾನವದೆಂದು ।
ಬಗೆಯುತ ನೀ ಕೆಡಬೇಡ ॥ ೧ ॥

ಸಿದ್ಧಿಯ ಫಲವದು ಅಘಟಿತಘಟನೆ ।
ಬುದ್ಧಿವಂತನೆ ತಿಳಿ ನೀ ॥
ಶುದ್ಧ ಚೈತನ್ಯದಿ ಮಾಯೆಯದಿಲ್ಲೈ ।
ಸಿದ್ಧಿ ಮಾಯೆಯ ಮಗಳು ॥ ೨ ॥

ಜ್ಞಾನಸಿದ್ಧಿಗಳ ಭೇದವನರಿಯುತ ।
ಜ್ಞಾನಿಯಾಗೆಲೊ ಮನುಜಾ ॥
ನಾನಾಪರಿಯಿಂ ಪೇಳಿದನಿದನಾ ।
ಜ್ಞಾನಿ ಶಂಕರಗುರುರಾಯಾ ॥ ೩ ॥

**– ದೇವ**

## ೭೬

**ರಾ. ದರ್ಬಾರಿ** **ತಾ. ತ್ರಿವಟ**

**(ಚಾಲ – ಬರಿ ಮೋಹದೆ ಬಳಲಿತು ಜೀವಾ ಎಂಬಂತೆ)**

ಅರಿ ನಿನ್ನಯ ನಿಜವನು ಜೀವಾ ।
ಅರಿವಿಂದೆ ನೀನೆ ಆ ದೇವಾ ॥ ಪ ॥

ಸಾರಿ ಪೇಳಿತು ಈ ನುಡಿ ಶಾಸ್ತ್ರ ।
ಅರಿತು ನೋಡಲು ನೀನೆ ಕೃತಾರ್ಥ ॥
ದೇಹಮನಗಳ ತ್ಯಾಗದಿಂದೆ ।
ಉಳಿವುದಾ ನಿಜವೊಂದೇ ॥ ೧ ॥

ಈ ಬೋಧದಾ ಅನುಭವ ಪಡೆಯ್ಯೆ।
ನಾಶಮಾಡು ಈ ಮನವಾ ॥
ಈಶಜೀವರಾ ಐಕ್ಯದ ನಿಜವಾ।
ಪೇಳ್ದ ಶಂಕರದೇವಾ

**– ದೇವ**

## ೭೭

**(ಚಾಲ – ಪಹಲೇಜೊ ಮೊಹಬತಸೆ ಎಂಬಂತೆ)**

ಚಿರಶಾಂತಿಯ ಪಡೆವುದಕೆ। ಮನ ತ್ಯಾಗಮಾಡು ಜೀವಾ।
ಮನವೇ ಭವಬಂಧನಕೆ। ಘನಕಾರಣವ್ವೆ ಜೀವಾ ॥ ಪ ॥

ತಿಳಿ ಈ। ಮನದಾ। ನಾಶಾ। ಆದಾಗಲೆ ನಿಜಮುಕುತಿ।
ಮನ ಮೋಕ್ಷದ ಸಾಧನವ್ವೆ। ಅನುಮಾನಿಸದಿರು ಜೀವಾ ॥ ೧ ॥

ಮನವಿಲ್ಲದ ಆ। ಸ್ವರೂಪ। ಅದು ತಾನೆ ನಿರ್ವಿಕಲ್ಪ।
ಅದೆ ನಾನಿಹೆನೆಂದರಿಯ್ಯೆ। ಇದೆ ಮನದ ತ್ಯಾಗ ಜೀವಾ ॥ ೨ ॥

ಇದು ಪರಮ ಪದ। ಆನಂದ। ವೇದಾಂತದ ಘನಬೋಧಾ।
ಗುರುಪುಂಗವ ಶಂಕರನಾ। ಪರಮಾರ್ಥ ಬೋಧಸಾರ ॥ ೩ ॥

**– ದೇವ**

## ೭೮

**ರಾ. ಭೈರವಿ** **ತಾ. ದಾದರಾ**

ಜ್ಞಾನ ಮಾಡಿಕೊ। ಆತ್ಮಜ್ಞಾನ ಮಾಡಿಕೊ।
ಜ್ಞಾನದೆ ಕಲ್ಯಾಣವೆಂದು। ತಾನಿರೆ ಶ್ರುತಿ ಮುಂದೆ ಬಂದು ॥ ಪ ॥

ನಿನ್ನೊಳಿರುವ ಸುಖವ ಮರೆದು।
ಅನ್ಯವಿಷಯಗಳಲಿ ಬೆರೆದು ॥
ನನ್ನವೆಂದು ಬಾಯಿ ತೆರೆದು।
ಬನ್ನಬಡುವದನ್ನು ತೊರೆದು ॥ ೧ ॥

ಒಳಿತುಕೆಡುಕುಗಳನು ಮಾಡಿ।
ಕೊಳಕುಭೋಗಗಳನು ಕೂಡಿ ॥
ಬಳಲುತಿರುವ ಬಗೆಯ ದೂಡಿ।
ಕುಳಿತು ನಿನ್ನ ನಿಜವ ನೋಡಿ ॥ ೨ ॥

ಕುರುಡು ನಂಬುಗೆಗಳ ಕೆಡಿಸಿ।
ಬರಡುಬಯಕೆ ಬಡಿದೋಡಿಸಿ ॥
ಮರುಳುಮತಿಯ ಹಟವ ಬಿಡಿಸಿ।
ಗುರುನಾರಾಯಣನ ನುಡಿಸಿ ॥ ೩ ॥

– ಶ್ರೀ ಶಂಕರ.

## ೭೯

**ರಾ. ಮಿಯಾಮಲ್ಹಾರ** **ತಾ. ಜಲ್ದಯಕ್ಕಾ**

ಜ್ಞಾನಾಮೃತ ಭುಜಿಸು ಜೀವ।
ಮಾನವಜನುಮದ ಗುರಿಯಿದು ॥ ಪ ॥

ಶುದ್ಧಮನದ ಪಾತ್ರೆಯಲ್ಲಿ।
ಸದ್ಗುರುವಿನ ಬೋಧದನ್ನ॥
ಶುದ್ಧ ಚೈತನ್ಯಾತ್ಮ ನೀನೆ।
ಬದ್ಧಜೀವನಲ್ಲವೆಂಬ ॥ ೧ ॥

ಶಿವರೂಪನ ಸಚ್ಚಿದಾತ್ಮ।
ಭವಬಂಧನವೆನ್ನೊಳಿಲ್ಲ॥
ಅವಿನಾಶಿಯೆ ನಾನು ಎಂಬ।
ಸುವಿಚಾರದ ಬಾಯಿಯಿಂದ ॥ ೨ ॥

ಸದ್‌ರೂಪದ ಆರೋಗ್ಯ।
ಚಿದ್‌ರೂಪದ ಪರಮ ಭಾಗ್ಯ॥
ಆನಂದದ ನಿಧಿಯಾಗುವಿ।
ಸದ್ಗುರುಶಂಕರನ ಬೋಧ ॥ ೩ ॥

– ದೇವ

## ೮೦

**ರಾ. ಭೀಮಪಲಾಸ** **ತಾ. ಕವಾಲಿ**

ಜಗವಿದು ಪುಸಿಯ್ಯೆ। ಬಗೆವೊಡೆ ಮನುಜಾ
ತೋರುತಿಹ ಕನಸಿನಂತೆ। ಇರುವೆ ॥ ಪ ॥

ನನಸಿನ ಅರಿವದು ದೊರಕುವ ತನಕ।
ಕನಸಿದು ಎನ್ನುವ ಕಲ್ಪನೆ ಇಹುದೆ?॥
ನನಸಿನ ನನಸಾಗಿಹ ಪರವಸ್ತುವೆ।
ತಾನೆ ನಿಜವು ಎಂಬರಿವಾಗುತಲಿರೆ ॥ ೧ ॥

ನಿರುತದಿ ಸಮನಾಗಿರಲರಿಯದ ಈ।
ತೋರಿಕೆ ಅನಿಸಿಕೆಗಳು ನಿಜವಲ್ಲವು॥
ಪರಿಕಿಸೆ ಸತತದಿ ಸಮನಾಗಿರುತಿಹ।
ಪರಮ ಪದವೆ ತಾನೆಂದರಿಯುತಲಿರೆ ॥ ೨ ॥

ಅಳಿಯುವ ಜಗವಿದು ಬೆದರುವಿ ಏತಕೆ।
ತಿಳಿಯುತಲೀಪರಿ ನಿಜವಸ್ತುವನು॥
ಗಳಿಸಿಕೊಂಡು ನೀ ನಿನ್ನಯ ಮುಕುತಿಯ।
ಕಲುಷರಹಿತಶಂಕರನಡಿಯರಿಯಲು ॥ ೩ ॥

**– ದೇವ**

## ೮೧

ರಾ. ಯಮನ ತಾ. ತ್ರಿವಟ

(ಚಾಲ – ರಘುಪತಿರಾಘವ ರಾಜಾರಾಮ)

ಬಿಡು ಬಿಡು ಮನುಜಾ ಜಡದಭಿಮಾನ।
ಪಡೆ ಗುರುವಿನಲಿ ಸ್ವಾತ್ಮದ ಜ್ಞಾನಾ ॥ ಪ ॥

ಈ ಸುಖದುಃಖದ ಬಡಿದಾಟದಲಿ।
ಗಾಸಿಯಾಗುತಲಿ ಸಾಯುವದೇ ದಿಟ।
ಲೇಸಾದರು ಸುಖ ಕಾಣೆಯಿದರೊಳು॥
ಕ್ಲೇಶವ ನೀಗುವಿ ನಿನ್ನ ನೀ ತಿಳಿವೊಡೆ ॥ ೧ ॥

ಮರಳಿ ದೇಹ ಪಡೆಯದ ದಿವ್ಯ ಬೋಧ।
ಪರಮಶಾಂತಿ ದೊರಕಿಸುವ ಪ್ರಮೋದ॥
ದುರುಳಸಂಸ್ಕೃತಿಯ ಪಾಶದ ಛೇದ।
ಮರೆಯದೆ ಮಾಳ್ಪುದು ಸ್ವಾತ್ಮದ ಶೋಧ ॥ ೨ ॥

ಈ ಘಟ ಮರಣಕೆ ಶಿಲುಕಿದಾದರೂ ।
ಈ ಘಟದಲಿ ನೀ ಅಮರನೆ ಇರುವೀ ॥
ಬೇಗನೆ ಜೀವನ್ಮುಕುತಿಯ ಪಡೆಯ್ಯೆ ।
ಯೋಗಿ ಶಂಕರನ ಸದ್ಬೋಧದಲಿ ॥ ೩ ॥

– ದೇವ

## ೮೨

**ರಾ. ಭೀಮಪಲಾಸ** **ತಾ. ದಾದರಾ**

ವಿಷಯ ಸುಖ । ಕ್ಷಣಭಂಗುರ ।
ಕೊನೆಯಲಿಯಿದು । ದುಃಖರೂಪ ।
ಪೂರ್ಣಶಾಂತಿ ದೊರಕದು । ಈ ॥ ಪ ॥

ಮೋಹದಿಂದ ಬಯಸುತಿರುವ ।
ಇಹಪರಲೋಕಗಳ ಸುಖವು ॥
ನಾಶವಂತ ಕೊನೆಯಲೊಮ್ಮೆ ।
ಕ್ಲೇಶದಾಯಕವು ತಿಳಿಯ್ಯೆ ॥ ೧ ॥

ಪರಮಸೌಖ್ಯ ಆತ್ಮರೂಪ ।
ಅರಿತುಕೊಂಡು ನಿನ್ನೊಳಗೆ ॥
ಮರುಳಾಗದೆ ವಿಷಯಸುಖಕೆ ।
ಗುರುಶಂಕರನಡಿ ಸೇವಿಸು ॥ ೨ ॥

– ದೇವ

## ೮೩

(ಚಾಲ – ಸಾವನಕಿ ನಜಾರೆ ಹೈ ಎಂಬಂತೆ)

ತಿಳಿ ಸುಖಕರವೀ ಬೋಧ । ಅಹ । ಅಹ ।
ಗೆಳೆಯನೆ ಮುಕುತಿಪ್ರದಾ । ಘನಮೋದ ।
ಬಲು ಆನಂದವೀವ ಪದ ॥ ಪ ॥

ಪರಮಾನಂದಾ ನೀಡಿ । ತೋರಿಕೆ ಪುಸಿಮಾಡಿ ।
ನಿಜತೋರಿ । ನಿಜ ಸಾಯುಜ್ಯವೀಯುವದ್ಯೆ ॥ ೧ ॥

ಮರುಳರ ಮಾತೆಂದು । ಮದದಲಿ ಗಳಹದಿರ್ಕೈ ।
ಇಂತೆಂದು । ಮದದಲಿ ಗಳಹದಿರ್ಕೈ ।
ಗುರುಶಂಕರ ಬೋಧವಿದು ॥ ೨ ॥

**– ದೇವ**

## ೮೪

(ಚಾಲ – "ಮೊಹೋಬತ್ ಒಸೆ ಢಡಕನಹ್ಯೆ" ಎಂಬಂತೆ)

ಮಹಾತ್ಮರಾ ನುಡಿಯ ಸವಿಯನು ನೀ ।
ಸವಿಯಲೋ ಮೂಢಮಾನವನೇ ॥ ಪ ॥

ಸದಾ ನೀ ಮುಕ್ತನೆಂದೆನುವಾ ।
ಆ ನುಡಿಯಾ ಕೇಳದಂತಿರುವಿ ।
ಈ ಜಗವೇ ನೈಜವೆಂದೆನು ತಾ ।
ಸ್ವದೇಹದೀ ಆತ್ಮಭಾವನೆಯಾ ।
ತಳೆದು ನೀ ಮೂಢ ನಾಗಿರುವಿ ॥ ೧ ॥

ತ್ರಿಕಾಲ ಮೀರಿ ನೆಲೆಸಿರುವಾ ।
ಆ ಸ್ಥಿತಿಯೇ ನೀನು ಎಂದೆನುವಾ ।
ಸ್ವರೂಪಾನಂದದಾ ನಿಧಿಯಾ ।
ತಿಳಿದು ನೀ ಅಮರನಾಗೆಲವೋ । ॥ ೨ ॥
ಶಂಕರನಾ ಬೋಧವಚನವನಾ

**– ಸದಾಶಿವ**

## ೮೫

(ಚಾಲ – "ಏ ಜಿಂದಗೀ ಉಸೀಕಿ ಹ್ಯೆ" ಎಂಬಂತೆ)

ಏ ಜೀವ ಅರಿಯೊ ನಿಜವನು ।
ಶಾಂತವಾದ ಇರವನು ।
ಮನದ ಮೂಲಪದವನು ॥ ಪ ॥

ಈ ತನು ಈ ಮನ ನಾನು ಎಂದು ತಿಳಿಯುತ ।
ಇದ್ದುದನ್ನು ಮರೆತು ನೀನು ।
ಮಾಡುತಿರುವಿ ಮೋಜನು ।
ಕೀಳಬಾಳ ನಂಬಿ ನೀ ।
ಮರೆತು ನಿಂದಿ ನಿಜಸುಖ ॥ ೧ ॥

ಕ್ಷಣಕ್ಷಣಕ್ಕೂ ಕಾಲನು ।
ಕಡಿಯುತಿಹನು ಕಾಯವ ।
ಜವದಿ ಅರಿಯೊ ಆತ್ಮವ ।
ಪೂರ್ಣಬ್ರಹ್ಮರೂಪವ ।
ಶ್ರವಣ ಮಾಡಿ ಮುದದಿ ನೀ ।
ಶಂಕರಾರ್ಯ ಬೋಧವಾ ॥ ೨ ॥

– **ಸದಾಶಿವ**

## ೮೬

(ಚಾಲ – ತೂ ಮೇರಾ ಚಾಂದ ಮೈ ತೇರೀ ಚಾಂದನೀ ಎಂಬಂತೆ)

ತಿಳಿ ಆತ್ಮರೂಪವಾ । ನಿಜಾನಂದವಾ । ನೀऽऽऽ... ।
ತಿಳಿ ಬ್ರಹ್ಮರೂಪವಾ । ನಿಜಾಧಾರವಾ । ನೀऽऽऽ... ।
ಬಿಡು ಗರುವದ ಭಾವಾ । ಇದೇ ಜ್ಞಾನವಾ
ಇದೇ ಬೋಧವಾ ॥ ಪ ॥

ಕಲ್ಪನೆರಹಿತಾ । ಚೈತನ್ಯಾತ್ಮಾ ।
ಜಗದಾಧಾರನು ತಾऽऽ ।
ಆನಂದಾತ್ಮನ । ತಿಳಿವಿದು ನಿನಗೆ ।
ಶಾಂತಿಗೆ ಸಾಧನವೈ ॥ ೧ ॥

ಶ್ರವಣಮನನವಾ ಸುವಿಚಾರವನ ।
ಗುರುಮುಖದಲಿ ನಿಜವಾऽऽ ।
ತಿಳಿದನುಭವದಲಿ ನೀ ನಿಶ್ಚಯಿಸೈ ।
ಶಂಕರ ಬೋಧವನಾ ॥ ೨ ॥

– **ದೇವ**

## ೮೭

(ಚಾಲ – "ಸುನರೀ ಸಖಿ" ಎಂಬಂತೆ)

ತಿಳಿ ಜೀವನೇ । ಅಭಿಮಾನವ । ತೊರೆದಿನ್ನು
ಗುರುಬೋಧ ಕೇಳಲು ನಡೆ ನೀ
ಈ ಸಂಸಾರ ತಾಪವ ಕಳೆ ನೀ ॥ ಪ ॥

ಗುರುಪಾದಕೆರಗೋ । ಪರಿಪ್ರಶ್ನೆಮಾಡೋ ।
ದುರುಳ ಭೋಗಗಳಲ್ಲಿ ವೈರಾಗ್ಯತಾಳೋ ॥
ಪರಮಾತ್ಮನಾ ತತ್ವ ತಿಳಿ ಜೀವನ ।
ಘನ ಪಾವನ ಮಹುದೈಯ್ಯ । ತಿಳಿ ನೀ ।
ಈ ಸಂಸಾರ ತಾಪವ ಕಳೆ ನೀ ॥ ೧ ॥

ಅರಿ ನಾನು ನಾನೆಂಬ ಅನಿಸಿಕೆ ಪುಸಿಯೋ ।
ಬರಿ ನೋಟ ಜಗವೆಲ್ಲ ಕನಸೆಂದು ತಿಳಿಯೋ ॥
ಚೈತನ್ಯನೆ ನೀನೆ ಆನಂದನೇ ।
ತಿಳಿ ಗುರುದೇವರಾಯನ ಬೋಧಾ ।
ಅದು ತಾನೆ ತಾನಾಗಿರ್ದ ಮೋದಾ ॥ ೨ ॥

**– ಜಯಮ್ಮ**

## ೮೮

(ಚಾಲ – ತನಡೋಲೆ ಮೆರೆ ಮನಡೋಲೆ ಎಂಬಂತೆ)

ತನು ನೀನಲ್ಲವು । ಮನ ನೀನಲ್ಲವು ।
ಚಿನುಮಯ ನಿಜಾತ್ಮಪೂರ್ಣ ನೀ ।
ಅನುದಿನ ಮನನವ ಮಾಡು ನೀ ॥ ಪ ॥

ಎಚ್ಚರ ಕನಸನು । ತನಿನಿದ್ರೆಯನು ।
ಮೀರಿದ ತುರೀಯನೆಂದು ॥
ಸಚ್ಚಿತ್ ಸುಖಮಯನಾದ ಸ್ವರೂಪನೆ ।
ನೀನಾಗಿಹೆ ತಿಳಿಯಿಂದು । ಸ್ವರೂಪ ನೀನಾಗಿಹೆ ತಿಳಿಯಿಂದು ॥
ಅಚ್ಯುತಪದವಿಯ । ನಿಶ್ಚಯದಲಿಪಡೆ ।
ಸ್ವಚ್ಛವಿಚಾರವ ಕೇಳುತಾ ।
ಅನುದಿನ ಮನನವ ಮಾಡು ನೀ ॥ ೧ ॥

ಕನಸಿದು ತಿಳಿ ಈ । ತೋರುವಜಗವು ।
ತೋರಿದರೂ ಪುಸಿಯೆಂದು ।
ಅನಿಸಿಕೆಯಡಗಲು ಉಳಿಯುವ ಸತ್ಯವೆ ।
ಬ್ರಹ್ಮಾನಂದವೆಂದು । ತಿಳಿ ನೀ ಬ್ರಹ್ಮಾನಂದವೆಂದು ॥
ಮನದೊಳಗೀಪರಿ । ಅನುಸಂಧಾನದಿ ।

ಅನುದಿನದಲಿ ನೆಲೆನಿಲ್ಲು ನೀ ।
ಸನ್ನುತ ಶಂಕರ ಬೋಧವಿದು ॥ ೨ ॥

– ಜಯಮ್ಮ

## ೪೯

(ಚಾಲ – ಇಸ ಜೀವನ ಸಾಥೀ ಬಿಛಡಗಯೆ ಎಂಬಂತೆ)

ತಿಳಿ ನಿನ್ನಯ ನಿಜವಾ ಎಲೆ ಜೀವಾ । ಅಳಿ ದೇಹದ ಭಾವಾ ।
ಮೋಹವಾ । ಕಳೆ ನಾನೀನೆನ್ನುವ ಭೇದವಾ ॥ ಪ ॥

ತನು ಮೂರರ ಸಾಕ್ಷೀ ನೀನಿಹೆ ।
ಘನ ಚಿನ್ಮಯರೂಪಾ ನೀನಿಹೆ ।
ಅನುಮಾನಿಸದೀಪರಿ ಯೋಚಿಸು ನೀ ।
ಮನವಾರೆ ಇದೇ ನಿಜವೆಂದೆನುತಾ ॥
ಅನುದಿನದಲಿ ನಿಶ್ಚಯಗೊಳಿಸುತಲಿ ।
ಅನುಭವದಲಿ ತಿಳಿ ಈ ಬೋಧವಾ ।
ಕಳೆ ನಾನೀನೆನ್ನುವ ಭೇದವಾ ॥ ೧ ॥

ಇದು ತೋರಿ ಅಡಗುವಾ ಕಲ್ಪನೆ ।
ಅದು ತೋರಿಕೆಯಳಿದ ಆತ್ಮನೇ ।
ಇದು ಕನಸಿನ ಪರಿ ಈ ಜಗವೆಲ್ಲ ।
ಅದು ನೀನಿರುವಿ ಇದು ನೀನಲ್ಲ ॥
ಇದೆ ತಿಳಿವಿಕೆಯಿಂದಲಿ ಮುಕುತಿ ಕಣಾ ।
ಇದೆ ಶಂಕರಗುರುವಿನ ಬೋಧವಾ ।
ತಿಳಿದಾನಂದಿಸು ನೀನೇ ಶಿವಾ ॥ ೨ ॥

– ದೇವ

## ೯೦

(ಚಾಲ – ರಿಮ್ ಝಿಮ್ ಬರಸೆ ಬಾದಲವಾ ಎಂಬಂತೆ)

ಅರಿವಿನ ಅರಿವಾ ತಿಳಿ ಜೀವಾ । ಆನಂದರೂಪದ ಸಿರಿಯಾ ।
ಅದೇ ನೀನು ಜೀವಾ ಜೀವಾ । ಅದೇ ನೀನು ಜೀವಾ ॥ ಪ ॥

ಅನಿಸಿಕೆಯಡಗಲು ಉಳಿಯುವ ಸತ್ಯವೆ ನೀನಿಹೆ । ನೀನಿಹೆ ।
ಮನಸಿನ ತೋರಿಕೆ ಅಡಗುವಿಕೆಗಳಿಂ ಬೇರಿಹೆ । ಬೇರಿಹೆ ॥

ಈ ನಾನೆಂಬುದು ಮನಸಿನದು ।
ಆ ನಾನೆ ನೀನಾಗಿರುವಿ ಅದೇ ನಿಜವು ಜೀವಾ ॥ ೧ ॥

ಕನಸಿನ ಪರಿ ಈ ತೋರುವ ಜಗವ್ಯೆ ನೋಡು ನೀ । ನೋಡು ನೀ ।
ನಾನಾ ವಿಧಗಳು ಪುಸಿಯಾಗಿಹವ್ಯೆ ದೂಡು ನೀ । ದೂಡು ನೀ ॥
ಆನಂದಾತ್ಮನೆ ನೀನಿರುವೀ । ಆನಂದದಿಂದಲಿ ತಿಳಿಯ್ಯೆ ।
ಶಂಕರಾನಂದಬೋಧಾ । ತಿಳೀನೀನೆ ನಿನ್ನೋಳ್ ॥ ೨ ॥

– ದೇವ

## ೬೧

(ಚಾಲ – "ಭೋಡೆ ಬಾಬುಲಕಾ ಘರ್" ಎಂಬಂತೆ)

ದೂಡು ಧನಮಾನಗರ್ವವ ।
ಅಭಿಮಾನವೆಲ್ಲವ ತರವಲ್ಲವೋ ॥ ಪ ॥

ಶಮೆದಮೆವ್ಯೆರಾಗ್ಯ ದೃಢವಾಗಿಹ ।
ಶ್ರುತಿವಿದಿತಾಗಿಹ । ಘನ ವಿನಯಾದಿ ಸಾಧನೆ ।
ಪರಮಾರ್ಥಕೆ । ಬೇಕು ತಿಳಿ ಜೀವನೇ ॥ ೧ ॥

ಅನುಭಾವಕುಚಿತಾದ ಪರಿ ಪ್ರಶ್ನೆಯಾ ।
ಮಾಡು ನಿಜ ಶೋಧವಾ । ನೀಡು ಶಿರವನ್ನು
ಗುರು ಶಂಕರನ ಪಾದಕೆ ॥ ೨ ॥

– ದೇವ

## ೬೨

(ಚಾಲ – "ಸಪನೋಕಿ ಕಹಾನೀ ದುನಿಯಾಕೊ" ಎಂಬಂತೆ)

ಸಂಸಾರದ ಹುದುಲಾ ತುಳಿಯುತಿಹ ।
ಮತಿಹೀನ ಮನುಜಾ ನೀ ಕೇಳೋ ॥ ಪ ॥

ಯಾಗವ ಮಾಡಿ ಪಡೆಯುವಿಯೇನೋ ।
ಯಾಗದಿ ತ್ಯಾಗವು ಸಿದ್ಧಿಪುದೇನೋ ।
ಮನದ ತ್ಯಾಗವೇ ತ್ಯಾಗವು । ಘನತ್ಯಾಗವು ॥ ೧ ॥

ಕರ್ಮದ ಮರ್ಮವ ಅರಿತಿಹೆಯೇನೋ ।
ಕರ್ಮದಿ ಮೋಕ್ಷವ ಪಡೆಯುವಿಯೇನೋ ।
ಕರ್ಮವು ಮೋಕ್ಷಕೆ ಕಂಟಕ । ಮಹಾ ಕಂಟಕ ॥ ೨ ॥

ಮಾಯಾರಹಿತ ಆತ್ಮನು ನೀನೇ ।
ತೋರಿಕೆಯಿಲ್ಲದ ಚೈತನ್ಯನೆ ನೀ ।
ಎಂದು ಪೇಳುವ ಶಂಕರ । ಶಿವಶಂಕರ ॥ ೩ ॥

– ಸದಾಶಿವ

## ೯೩

(ಚಾಲ – "ಮುಝೆ ಇಲ್ಜಾಮ ನ ದೇನಾ" ಎಂಬಂತೆ)

ವಚನ : ಇದೇ ಆಧ್ಯಾತ್ಮವು ಕೇಳೋ ।
ಇದೇ ಆನಂದ । ಇದೇ ಪರಮಾರ್ಥ ಜ್ಞಾನ ।
ಸ್ವಾತ್ಮದ ಭಾನ ।

ಸದಾನಂದನಾಗಿರ್ದ । ಚಿನ್ಮಾತ್ರ ನೀನೆ ।
ನಿರಾಕಾರ ನೀನಾಗಿಹೆ । ತಿಳಿಯೋ ನಿನ್ನ । ನೀನು ನಿನ್ನ ॥ ಪ ॥

ಪರಾನಂದಮಯನಾದ । ಪರಮಾತ್ಮನನ್ನು ।
ಮಹಾಶ್ರದ್ಧೆಯಿಂದ ತಿಳಿ ಈಗ ಇನ್ನು ।
ನಿರಾಕಾರ ನೀನಾಗಿಹೆ ॥ ೧ ॥

ಇದೇ ಜ್ಞಾನದಿಂ ನೀನು ಪಡೆಬೇಗ ಮುಕ್ತಿ ।
ಇದಿಲ್ಲಾಗಿ ಬೇರಾವುದಿಲ್ಲಯ್ಯ ಯುಕ್ತಿ ।
ನಿರಾಕಾರ ನೀನಾಗಿಹೆ ॥ ೨ ॥

ನಿಶ್ಶಬ್ದಪೂರ್ಣ ಪರಬ್ರಹ್ಮ ನೀನೇ ।
ಇದೇ ಪೇಳ್ದ ಜೀಯಾ । ಸದಾ ಶಂಕರಾರ್ಯ ।
ನಿರಾಕಾರ ನೀನಾಗಿಹೆ ॥ ೩ ॥

– ಸದಾಶಿವ

## ೯೪

(ಚಾಲ – "ಓ ಜಾನೆವಾಲೆ ಠಹರೊ ಜರಾ" ಎಂಬಂತೆ)

ಇದೇ ಪೂರ್ಣಪದಾ ತಿಳಿ ಜೀವಾ।
ಆತ್ಮಸ್ವರೂಪಾ ನೋಡು ನೀ।
ಈ ಜಗಕೆಲ್ಲ ಆಧಾರಾ। ಪರಮಪದವದೇ ನೋಡು ನೀ ॥ ಪ ॥

ತೋರುವೀ ಜೀವರಾಧಾರ।
ತೋರದಾ ಪೂರ್ಣಜ್ಞಾನರೂಪ।
ಅದೇ ಕಲ್ಪನೆರಹಿತ ಅದ್ವೈತ।
ಪರಮಪದವದೇ ನೋಡು ನೀ ॥ ೧ ॥

ಮನವಾಣಿಗೆ ಸಿಗದ ಆ ಸ್ಥಿತಿ ಪೂರ್ಣಾ। ಪರಮಾತ್ಮನೈ।
ಅದೇ ನೀನಿಹೆ ಜೀವಾ ತಿಳಿಯಿದನಾ।
ಗುರು ಶಂಕರನಾ ಬೋಧವಾ ॥ ೨ ॥

– ದೇವ

## ೯೫

(ಚಾಲ – ಮಿಲಕೆ ಬಿಛಡ ಗಯೇ ಅಖಿಯಾ ಎಂಬಂತೆ)

ತಿಳಿ ನೀನೆ ಪರಬ್ರಹ್ಮ ರೂಪ। ಏ ಜೀವಾ। ತಿಳಿ ನೀನೆ ॥ ಪ ॥

ಪ್ರಾಣಕ್ಕೂ ಪ್ರಾಣ ಇದೆ ನೋಡು ಜಾಣ।
ಈ ವಿಶ್ವದಲ್ಲೇಕ ತಾಣಾ ॥
ಒಳ ಹೊರಗೂ ತುಂಬಿರ್ದ ಘನವೇ।
ನಿರಾಕಾರ ವಿಭುವೇ ಈ ಬ್ರಹ್ಮ ತಿಳಿ ನೀನೆ ॥ ೧ ॥

ಕಲ್ಪನಾ ನೀಗಿ ತಾನೊಂದೆ ಆಗಿ। ಅಲ್ಪತ್ವವೆಲ್ಲವು ಪೋಗಿ।
ಅದೇ ನೋಡು ಸುಖರೂಪಬ್ರಹ್ಮ॥ ಅದೇ ಪೂರ್ಣಬ್ರಹ್ಮ।
ಆ ಬ್ರಹ್ಮ ತಿಳಿ ನೀನೆ ಪರಬ್ರಹ್ಮರೂಪಾ ॥ ೨ ॥

ಸರ್ವಾಧಾರಾ ನಭದಂತೆ ಪೂರಾ।
ನಿರ್ವಿಕಲ್ಪ ಸುಖಸಾರಾ ॥
ಅದೇ ನೋಡು ಘನಾನಂದರೂಪ। ಶಂಕರರೂಪ
ಈ ರೂಪಾ ತಿಳಿ ನೀನೆ ಪರಬ್ರಹ್ಮರೂಪ ॥ ೩ ॥

– ದೇವ

## ೯೬

(ಚಾಲ – ಆಜಾ ಅಬ ತೂ ಆಜಾ ಎಂಬಂತೆ)

ಬೋಧಾಕೇಳು ಈಗ । ನಿಜಮುಕುತಿಯ ಪಡೆ ಬೇಗಾ । ಇರುವಾಗ ॥
ಧನದಾಶೆಯನ್ನು ತೊರೆದು ಚಿಂತಿಸದೆ ಇಹದಲಿ ವಿರತಿಯಲಿ ॥ ಪ ॥

ಆ ಬ್ರಹ್ಮ ನಾನು ಎಂದು । ಈ ಜೀವನಲ್ಲವೆಂದು ।
ಚೈತನ್ಯರೂಪ ನಾನು । ಜಡದೇಹನಲ್ಲವೆಂದು ॥
ಅನುಮಾನಕೆಡೆಯ ಕೊಡದೆ । ವೇದಾಂತತತ್ವವರಿತು ।
ಚಿಂತಿಸದೆ ಇಹದಲಿ ವಿರತಿಯಲಿ ॥ ೧ ॥

ಘೋರಾದ ಕರ್ಮ ನೀಗಿ । ಪಾರಾದೆನಿಂದು ಎಂದು ।
ಆಶಾಪಿಶಾಚಿಯಡಗಿ ನಾ ತೃಪ್ತನಾದೆನೆಂದು ॥
ಜವಭೀತಿಯಡಗಿತೆಂದು । ಅಭಿಮಾನತೊರೆದು ಅರಿಯೋ ।
ಶಿವಶಂಕರಬೋಧ । ಅವಿರೋಧ ॥ ೨ ॥

**– ಸದಾಶಿವ**

## ೯೭

**ರಾಗ. ಶುದ್ಧ ಕಲ್ಯಾಣ** **ತಾಳ. ಕವಾಲಿ**

ಎಲೆ ಮಾನವಾ । ಅಭಿಮಾನವಾ । ಅವಿವೇಕವಾ ದೂಡೈ ।
ಸುಖದುಃಖದಾ । ಘನ ಮೂಲವಾ । ಸುವಿವೇಕದೀ ನೋಡೈ ॥ ಪ ॥

ಪರರಿಂದ ಈ ಪರಿತಾಪವು । ಬರುತಿರ್ಪುದೆಂಬುದಿದೋ ॥
ಬರಿ ಭ್ರಾಂತಿಯೋ ನಿಜವಲ್ಲವೋ । ಆಲೋಚಿಸಿ ನೋಡೈ ॥ ೧ ॥

ಗ್ರಹಕಾಲಗಳ್ ಘನ ಕರ್ಮಗಳ್ ಇವು ಕಾರಣಲ್ಲವಿದೋ
ಮನವೇ ಇದೇ ಪರಿತಾಪದ ಘನಮೂಲವೈ ನೋಡೋ ॥ ೨ ॥

ಸಟೆಯಾಗಿಹ ಸಂಸಾರವ ದಿಟವೆಂದು ತೋರ್ಪುದಿದೋ ॥
ಮನದಿಂದಲೇ ಇದು ಕಾಂಬುದೋ ಮನವಿಲ್ಲದಾಗಿಲ್ಲ ॥ ೩ ॥

ಪರಮಾತ್ಮನ ಪರಿಪೂರ್ಣನ ಮರೆಮಾಡುತೀಮನವು ॥
ಹರಿದಾಡುತಾ ಸುಖದುಃಖವಾ ಗುಣಿಸುತ್ತ ತಾನಿಹುದೋ ॥ ೪ ॥

ಮನದಾಟಕೇ ಮರುಳಾಗದೇ ಗುರುಶಂಕರಾರ್ಯನಲಿ ॥
ಮನ ನಿಲ್ಲಿಸಿ ಈ ಮೋಹವಾ ಬಿಡು ಬೇಗ ನೀನೀಗ ॥ ೫ ॥

**– ದೇವ**

## ೯೮

(ಚಾಲ – ತೆರೇ ಹಮ್ ಯಹೀಸೆ ದುವಾ ಮಾಂಗತೇ ಹೈ ಎಂಬಂತೆ)

ಬಿಡೋ ಭ್ರಾಂತಿ ಜೀವಾ। ಬಿಡೋ ಕಾಮ್ಯಸೇವಾ।
ಅಹಂತಾ ಮಮತ್ವ। ಮಹಾಮೂಢಭಾವಾ ॥ ಪ ॥

ಜಗವನೆಲ್ಲ ಈಶ್ವರನೆ ಸೃಷ್ಟಿಸಿದ ಕೇಳೋ।
ಇದೋ ನಿನ್ನದೆಂಬುವದು ಏನಿಲ್ಲ ತಾಳೋ।
ಜಗವ ಸೃಷ್ಟಿಸಿದನಾತ ಪಾಲಿಸುವನಾತ।
ಇಗೋ ನಾನೆ ಪಾಲಿಸುವೆನೆನ್ನುವದು ವ್ಯರ್ಥ।
ಇದೇ ಭ್ರಮೆಯು ಮಮಕಾರ ಸಂಸಾರ ಭಾರ ॥ ೧ ॥

ನೀ ಧರಿಸಿರ್ದ ದೇಹವಿದ ನೀ ಸೃಷ್ಟಿಸಿದೆಯಾ।
ಇದೇ ರೀತಿ ಹೆರವರದು ಬಿಡು ನಿನ್ನ ಮಾಯಾ।
ಇದನು ಪಾಲಿಸುವನಾತನೀಶ್ವರನು ನೋಡಾ॥
ಇದೇ ರೀತಿ ಪಾಲಿಸುವನೆಲ್ಲವನು ನೋಡಾ।
ಮಹಾ ವಿಶ್ವವೆಲ್ಲ ತಿಳೀ ಈಶಲೀಲಾ ॥ ೨ ॥

ಜಗವ ನಾಶಗೊಳಿಸುವನು ಪ್ರಳಯದಲಿ ಈಶಾ।
ಮಗುಳೆ ಜಗ ಜೀವರನು ಸೃಷ್ಟಿಸುವ ತಾನೆ।
ಜಗದಿ ವರ್ಣವಾಶ್ರಮದ ಬಲುಕಾರ್ಯ ಪಾಶಾ॥
ಬಗೆಯಲೀಗ ಪಶುವಿನೊಲು ತಿರುಗಿಸುವನೀಶ।
ಮಹಾಯೋಗಿ ಶಂಕರನ ಶರಣಾಗೋ ಜೀವಾ ॥ ೩ ॥

– **ದೇವ**

## ೯೯

(ಚಾಲ – "ಚಾರ ದಿನ ಜಿಂದಗಾನಿರೇ" ಎಂಬಂತೆ)

ಕೇಳು ಇದು ನಿಜಸಾಧನಾ।
ಮಾಡು ಕೈವಲ್ಯಪ್ರಾಪ್ತಿಯಿದೋ।
ಮಾಡು ನೀ ಮಾಡು ಆನಂದಪ್ರಾಪ್ತಿಯಿದೋ ॥ ಪ ॥

ಭಕ್ತಿಭಾವದಿ ಭಜಿಸುತ ನಿನ್ನ।
ಚಿತ್ತವನು ಪರಮಾತ್ಮನೊಳಿನ್ನು। ನಿಜಾತ್ಮದೊಳಿನ್ನು॥
ನೆಲೆಸುತಲಿ ಭವಬಂಧವಾ ನೀಗಿ।
ಆನಂದಪ್ರಾಪ್ತಿಗಿದೊ ॥ ೧ ॥

ವಿಷಯಚಿಂತನೆ ಮನದೊಳಗಿಹುದೇ ।
ನಾನು ನನ್ನದಿದೆಂಬುದು ಬೆಳೆಯೆ ಇದೇ ಕೇಳ್ ಮಾಯೆ ॥
ನಾಶವಹುದೀ ಮಾಯೆ ನೀ ನೋಡು ಈ ಭಕ್ತಿಯೋಗದಲಿ ।
ಮಾಡು ನೀ ಮಾಡು ಸನ್ಮಾರ್ಗಸಾಧನೆಯಾ ॥ ೨ ॥

ಭಕ್ತಿಯೊಂದೇ ಸುಲಭದ ಸಾಧನೆ । ಚಿತ್ತಶುದ್ಧಿಯನೀವುದು ನಿಜದಿ ।
ಮನುಜಗಿದು ಜಗದಿ । ತತ್ವವ ತಿಳಿವಾ ಮಾರ್ಗವತೋರಿ ॥
ಕೈವಲ್ಯವೀವುದಿದೋ । ಕೇಳು ನೀ ಕೇಳು
ಶ್ರೀ ಶಂಕರನ ಬೋಧಾ ॥ ೩ ॥

**– ದೇವ**

## ೧೦೦

(ಚಾಲ – ಮೈ ಜಾವೂಂಗಿ ಬಿಸರತ ಓಸೈಯ್ಯಾ ಎಂಬಂತೆ)

ಇದೇ ಪರಮಾರ್ಥ ಪ್ರಾಪ್ತಿಗೆ ಸೋಪಾನ ।
ತಿಳಿ ಇದರಲ್ಲಿ ಬೇಡಿನ್ನು ಅನುಮಾನ ।
ಇದೇ ಭಕುತಿಮಾರ್ಗವೇ ಸುಲಭ ಸೋಪಾನ ।
ತಿಳಿ ವೈರಾಗ್ಯಜ್ಞಾನಾದಿಗಳ ತಾಣಾ ॥ ಪ ॥

ಸಂಸಾರದೊಳಗಿರ್ದ ಜೀವಂಗೆ ।
ಸುಖದುಃಖದಿ ಬಳಲುವ ಮನುಜಂಗೆ ।
ಕಂಸಾರಿ ಶ್ರೀಕೃಷ್ಣನಾಮವೊಂದೇ ॥
ಪಾಪ ಸಂಹಾರಿ ಪರಶಿವನಾಮವೊಂದೇ ।
ಈ ಸಂಸಾರ ದಾಂಟುವಾ ನಿಜತಾಣಾ ॥ ೧ ॥

ನಿಷ್ಕಾಮ ಮನದಿಂದ ಭಜಿಸಲ್ಕೆ ।
ಬಹು ದುಷ್ಕರ್ಮ ಫಲವೆಲ್ಲ ತೊಲಗಲ್ಕೆ ।
ಶ್ರೇಷ್ಠ ವೈರಾಗ್ಯವು ನೆಲೆಸಲ್ಕೆ ॥
ಬಲು ಜಿಜ್ಞಾಸೆ ಮನದಲ್ಲಿ ಜನಿಸಲ್ಕೆ ।
ಈ ಪರಮಾತ್ಮಧ್ಯಾನ ಮಹಾಸಾಧನಾ ॥ ೨ ॥

ಆತ್ಮಜ್ಞಾನದ ಬೋಧ ನೆಲೆಗೊಂಡು ।
ಪರಮಾತ್ಮನ ರೂಪವೆ ತಾನೆಂದೂ ।

ಬರಿ ತೋರ್ಕೆ ಜಗವೆಲ್ಲ ಹುಸಿ ಎಂದೂ ॥
ಪರಮಾತ್ಮನೆ ನಿತ್ಯನು ನಿಜವೆಂದೂ ।
ವರಜ್ಞಾನವ ನೀಡಲ್ಕೆ ಈ ಸಾಧನ ॥ ೩ ॥

ಪರಮಾರ್ಥದನುಭವಿಗಳ ಸಂಗ ।
ನೆರೆದೊರಕುತಲಿರುತಿರೆ ಭವಭಂಗ ।
ವರ ಭಕ್ತಿ ಮಾರ್ಗದಿ ದೊರಕುವದೆಂದ ॥
ಇದೇ ಪರಮಾರ್ಥ ಪ್ರಾಪ್ತಿಗೆ ಮೂಲವೆಂದ ।
ಇದೇ ಗುರುಶಂಕರಾನಂದಕೃಪೆಯಿಂದ ॥ ೪ ॥

**– ದೇವ**

## ೧೦೧

**ರಾ. ಕೇದಾರ** **ತಾ. ತ್ರಿವಟ**

ಸಮರ್ಥನಾಗೋ । ಅಮರ್ತ್ಯನಾಗೋ ॥
ಮಮತ್ವ ಕಳೆದು । ಸಮತ್ವ ತಳೆದು ॥ ಪ ॥

ಶರೀರಿಯಾಗಿ । ವಿರಾಗಿಯಾಗಿ ॥
ಧರಾತಳದಲಿ । ವಿರಾಜಿಸುತಲಿ ॥ ೧ ॥

ವಿವೇಕದೃಷ್ಟಿ । ನಿವಾಳಿ ಸೃಷ್ಟಿ ॥
ತ್ರಿವಾರನಿಂದು । ಶಿವೋಹಮೆಂದು ॥ ೨ ॥

ವಿಕಲ್ಪರಹಿತ । ವಿಕಾರರಹಿತ ॥
ಅಕಾಮನಾಗಿ । ತ್ರಿಕಾಲ ನೀಗಿ ॥ ೩ ॥

ನೃದೇಹಧಾರಿ । ಸದಾ ವಿಚಾರಿ ॥
ವಿದೇಹನಾಗಿ । ತದೇಕನಾಗಿ ॥ ೪ ॥

ಗುರೂಕ್ತಜ್ಞಾನ ಸ್ವರೂಪಭಾನ ॥
ಕರಾಮಲಕದೊಲು । ವಿರಾಜಿಸುತಲಿ ॥ ೫ ॥

ದಯಾಬ್ಧಿಗುರು ನಾರಾಯಣ ಚರಣ ॥
ಪಯೋಜ ದರುಶನ । ಸುಯೋಗದಿಂದಲಿ ॥ ೬ ॥

**– ಶ್ರೀಶಂಕರ**

## ೧೦೨

(ಚಾಲ – ಘರ ಘರಮೆ ದಿವಾಲಿ ಎಂಬಂತೆ)

ಕಳವಳಿಸದಿರೈ ।
ಅಳಿವ ಬಾಳ । ನಂಬುತಲೀಗ । ತಿಳಿತಿಳಿಯೊ ಧೀರನಾಗಿ ।
ಪರಾಶಾಂತಿಯ ಬೇಗ । ಪರಾಶಾಂತಿಯಬೇಗ ॥ ಪ ॥

ದೊರಕುವದೆ ಶಾಂತಿ ಜೀವನೆ ಹೊರಹೊರಗೆ ನೋಡಲು ।
ಅರಿ ನಿನ್ನ ಹೃದಯದೋಳ್ । ಸಲೆವಾಸಿಪುದು ತಿಳಿಯಲು ।
ಸಲೆ । ಮರೆತಿರುವಿ ನೆನಸಿ ನೋಡು । ನಿನ್ನ ಮೂಲಸ್ವರೂಪ । ನಿನ್ನ ॥ ೧ ॥

ಈ ದೇಹ ನಾನು ಎಂಬ ಭ್ರಾಂತಿ । ಬೇಗ ತ್ಯಜಿಸುತ ।
ಬಾಧಿಸುತ ಬುದ್ಧಿಯನ್ನು । ಬೇರೆಯಾಗಿ ತಿಳಿಯುತ ।
ಬಾಧಾರಹಿತ । ನಾ । ವಾದ ಪದವೆ ನಾನಿಹೆನೆನುತ ॥ ೨ ॥

ಈ ನಿರ್ವಿಕಲ್ಪವಾದ ಸ್ಥಿತಿಯೇ । ತಾನಿಹೆನೆಂದು ।
ಅನುಭವದಿ ತಿಳಿದುಕೊಳ್ಳು ಪರಾಶಾಂತಿಯದೆಂದು ।
ನೀನೇ ಪ್ರಶಾಂತರೂಪನಿರಲು ಶೋಕಿಸಬೇಡ ॥ ೩ ॥

## ೧೦೩. ವಚನ

ಈ ರೀತಿಯೋಳ್ ವಿಚಾರದಿಂ ಪ್ರಶಾಂತನಾಗುತ ।
ಆ ಮೂಲರೂಪ ಪರಬ್ರಹ್ಮವೆನುತ । ಆ ಮಹಾವಾಕ್ಯಬೋಧ
ಪಡೆದು ಧನ್ಯನಾಗುತ । ಜೀವಂತಮುಕ್ತಿಸುಖವ ಸವಿದು
ಸದ್ಗುರುವ ಸ್ಮರಿಸುತ । ತೋರಿಕೆಯೆ ಕನಸೆಂದು ತಿಳಿಯುತ ॥

ಓ ನೀನೆ ಪುನೀತ । ಪರತರಜ್ಞಾನ ಪ್ರಶಾಂತ ।
ಶುದ್ಧಾತ್ಮನ ಜ್ಞಾನಾ ಮನಸಿಗೆ ಪೂರ್ಣ ನಿಧಾನ ॥
ಭೇದಾಂಧಕಾರರವಿಯಾದ ಗುರುವಿನ ಮಹಿಮಾ ।
ಶ್ರೀ ಗುರುವಿನ ಮಹಿಮಾ ॥ ೪ ॥

ನಾನೆಂತು ಪರಿ ಪೇಳಲಿ ನೀ ಅನುಭವಿಸಿದನಾ ।
ನಾನಾಪ್ರಕಾರ ಪೇಳಿಹನೆನಗಾಗಿ ದಯಾಳ ॥
ಜ್ಞಾನಾಂಬುಧಿ ಶ್ರೀ ಶಂಕರಗುರುರಾಯನ ಬೋಧ ॥ ೫ ॥

**– ದೇವ**

# ೧೦೪. ಗದ್ಯ

ಮಿಂಚಿನಂದದಿ ಓಡಿ । ವಂಚನೆಯ ಮಾಡುತಿಹ ।
ಚಂಚಲದ ಮನವೆ ನೀ ತಡೆದು ನಿಲ್ಲು । ಹಂಚಿಕೆಯ ಪಾರಾಗುವ
ದಕೆ ನೀ । ಕುದಿಯದಿರು । ಕುದಿಯದಿರು । ಕುದಿಯದಿರು ಎಲೆ
ಮನವೆ । ಸಿರಿಸಂಪದಗಳನು ಬಯಸಿ ॥ ಪ ॥

ತೋರಿ ಅಡಗುವ ಜಗವ । ಸತ್ಯವೆನ್ನುತ ಬಗೆದು । ತೋರದಿಹ
ಪರವಸ್ತುವನ್ನೇ ಮರೆದು । ಮೀರಿ ಸುಖದುಃಖಗಳ ।
ಘೋರಕಾನನದಲ್ಲಿ ಪಾರಾಗದಲೆ ಪೇಚಿನಿಂದ । ಪಾರಮಾರ್ಥಿ
ಕವಪ್ಪ । ನಿನ್ನ ಮೂಲವ ಮರೆದು । ಕುದಿಯದಿರು ।
ಕುದಿಯದಿರು । ಕುದಿಯದಿರು । ಎಲೆ ಮನವೆ ।
ಸಿರಿಸಂಪದಗಳನು ಬಯಸಿ ॥ ೧ ॥

ಮಾನ ಮರ್ಯಾದೆಗಳ । ನೇನನೂ ಬಯಸದಿರು ।
ಮಾನವಗೆ ತರವಲ್ಲವೀ ಬಳಲಿಕೆ । ಅನ್ಯರಿಗೆ ಉಂಟೆಂದು
ನನಗೇನು ಇಲ್ಲೆಂದು ॥ ಭಿನ್ನಭಾವನೆ ತಳೆದು । ನಿನ್ನ ನಿಜವನು
ಮರೆದು । ಕುದಿಯದಿರು ॥ ೨ ॥

ತೋರಿಕೆಗೆ ಸವಿಯಾಗಿ । ಮೀರಿ ವಿಷರೂಪವಹ ।
ಭೂರಿ ವಿಷಯಗಳನ್ನು ಧ್ಯಾನಿಸಲು ಬೇಡ ।
ದೇಹೇಂದ್ರಿಯಂಗಳ ಹರಿದಾಟವಿದು ತಿಳೀ ।
ನೇಹವನು ಹೊಂದದಿರು । ದೇಹದಲ್ಲಿ ॥ ಈ ಹದದಿ ವಿಷಯಗಳ
ಸ್ನೇಹವನು ಕಡಿದೊಗೆದು । ಸೋಹಮೆಂಬುವ ಪದವ
ತಿಳಿವುದನು ಬಿಟ್ಟು ನೀ । ಕುದಿಯದಿರು ॥ ೩ ॥

ಇಲ್ಲದುದನುಂಟೆಂದು ತಿಳಿವವನೆ ಕಡುಪಾಪಿ । ಇದ್ದುದನು
ಇಲ್ಲೆಂದು ತಿಳಿವವನೆ ಚಾಂಡಾಲ । ಇಲ್ಲದುದು । ಉಳ್ಳುದುದು ।
ಯಾವದೆನ್ನುವ ಭೇದ । ಬಲ್ಲವನೆ ಬಲ್ಲ ತಿಳಿಯೇ ॥
ಇಲ್ಲದುದು ಈ ಜಗವು । ಇದ್ದುದೆಲ್ಲವು ಬ್ರಹ್ಮ ॥
ತೋರುತಿದ್ದರೂ ಸಟೆಯು ತಿಳಿಯಲ್ಕೆ ಈ ಜಗವು ।
ತೋರದಿದ್ದರೂ ಸತ್ಯ ನಿರ್ವಿಕಲ್ಪದ ಬ್ರಹ್ಮ । ಪಾರಮಾರ್ಥಿಕಸತ್ಯ ।
ಅದೇ ನೀನು ಎಂದರಿತು । ಮೀರಿ ಸುಖದುಃಖಗಳ
ಬೇರೆಯಾಗುವದುಳಿದು । ಕುದಿಯದಿರು ॥ ೪ ॥

ಕನಸಿನೊಳಗಣ ಬಾಳ್ವೆ ಕನಸಾಗಿ ಹೋದಂತೆ । ನನಸೆಂಬುದಿದು
ಒಂದು ದೊಡ್ಡ ಕನಸು । ಕನಸು ನನಸುಗಳಲ್ಲಿ ।
ಭೇದವನು ಎಣಿಸದಿರು । ಚಿನುಮಯಾತ್ಮನೇ ನಾನು ಎಂದು
ತಿಳಿವುದನುಳಿದು । ಕುದಿಯದಿರು ॥ ೫ ॥

ನಿದ್ರೆಯೊಳಗಣ ಸ್ಥಿತಿಯನೆದ್ದಾಗ ನೆನಸಿಕೊ । ಇದ್ದುದಿಲ್ಲವು ಆಗ
ಕಲ್ಪನೆಯ ಜಾಲಾ । ಇದ್ದುದಾದರೆ ಜಗವು ಆಗೇಕೆ ತೋರದೋ ।
ಇದ್ದಾಗ ಕಲ್ಪನೆಯು ಜಗದ ತೋರ್ಕೆ । ನಿದ್ರೆಯೆನ್ನುವ
ಪೆಸರನೆದ್ದಾಗ ನೀನಿಟ್ಟೆ । ಇದ್ದು ದಿಲ್ಲವು ಆಗ ಹೆಸರುಗಿಸರು ॥
ಬುದ್ಧಿಯಿಂ ನಿಶ್ಚಯಿಸು । ಶುದ್ಧ ನಾನೇ ಇದ್ದೆ । ಇದ್ದುದಿಲ್ಲವು
ಕಲ್ಪನೆಯ ಜಾಲವು । ಇದ್ದಾಗ ಕಲ್ಪನೆಯು ತೋರುವವು
ವಿಷಯಗಳು । ಬಿದ್ದಾಗ ಕಲ್ಪನೆಯು ತೋರದಾಗಿಹವಾಗಿ ।
ಬದ್ಧತೆಗೆ ಮೂಲವಹ ವಿಷಯಗಳ ಬಯಸಿ ನೀ ಕುದಿಯದಿರು ॥ ೬ ॥

ನಾನು ನಾನೆಂಬುವೀ ಅನಿಸಿಕೆಯು ತೋರದಲೆ । ಏನೇನೂ
ಇಲ್ಲೆಂಬ ಸ್ಥಿತಿಯ ನೋಡೋ । ಏನು ಕಾರಣವದಕೆ ನಿದ್ರೆ
ಎನ್ನುತ ತಿಳಿದಿ । ಭಾನವಿಲ್ಲವೆ ನಿನಗೆ ನಾನಿದ್ದೆನೆಂಬ ।
ಧ್ಯಾನವನು ಮನದಂದು । ಆ ನಾನೇ ನಿಜವೆಂದು । ಏನರಿಯೆ
ನಿದ್ರೆಯನ್ನುವದನ್ನು ಬಿಟ್ಟು ನೀ । ನಾ ನಿರ್ವಿಕಲ್ಪನಾಗಿದ್ದೆನೆಂದರಿ
ಮನವೆ ॥ ಆನಂದರೂಪನೀ ಜ್ಞಾನರೂಪನು ನೀನು ।
ಸ್ವಾನುಭವದಿಂದದನು ನಿಶ್ಚಯಿಸಿ ನಿನ್ನೊಳಗೆ । ಮಾನಸದಿ
ಶಾಂತನಾಗುವದುಳಿದು ನೀ ಬರಿದೆ ಕುದಿಯದಿರು ॥ ೭ ॥

ಬಂದ ಸುಖದುಃಖಗಳನೊಂದನೂ ಬೇಡೆನದೆ । ನಿಂದು ನೀನವು
ಗಳನು ಸುಳ್ಳೆಂದು ಬಗೆದು । ಎಂದೆಂದಿಗೂ ಒಂದೆ ಬಗೆಯಾಗಿರ್ಪ
ಆನಂದ ರೂಪನೆ ನಾನು । ಎಂದು ನಿಶ್ಚಯಿಸಿ ನೀ । ದಂದುಗವ
ಹೊಂದದಲೆ ಸತ್ಯವನು ತಿಳಿದು ನಿರ್ದ್ವಂದ್ವವಾಗಿಹ ಪದವ
ಧ್ಯಾನಿಸುತ್ತ ॥ ಎಂದಿಗೂ ಇಲ್ಲದಿಹ ಜೀವಭಾವವನಿದನು ।
ಹೊಂದದಲೆ ಸುಖಿಯಾಗಿ ನಿಂದು ನಿಲುವುದನುಳಿದು ।
ಕುದಿಯದಿರು ॥ ೮ ॥

ಹುಟ್ಟುಸಾವುಗಳೆಂಬ ಕಟ್ಟುಕಲ್ಪನೆಗಳೇ । ಗಟ್ಟಿಯಾಗಿಹವೆಂದು
ಬಗೆದುಕೊಂಡು । ಬಿಟ್ಟು ನಿಜರೂಪವನು ಅರಿಯುವಾ

ಹವಣಿಕೆಯ । ಪಟ್ಟಾಗಿಹೋದಿ ನೀ ಸಂಸಾರ ನಂಬಿ ।
ದಿಟ್ಟತನದಲಿ ನಿನ್ನ ಮೂಲವನು ನೋಡಿ ನಿನ್ನಷ್ಟಕ್ಕೆ ನೀ
ಮುಕ್ತನಾಗುವದನುಳಿದು । ಈ ಕೆಟ್ಟು ಹೋಗುವ ಜಗದ
ಹಿರಿತನವ ಮಾಡಿ । ಬೆನ್ನಟ್ಟಿದಂತಾಯ್ತು ಮಾಯಾಮೃಗವ
ರಾಮಾ ॥ ಇಷ್ಟೆಲ್ಲ ಯೋಚಿಸುತ ಇನ್ನಾದರೂ ತಿಳಿಯೋ ।
ಕಟ್ಟುಕತೆಯಲ್ಲವಿದು । ನೀನೆ ಪರಮಾತ್ಮನಿಹೆ । ನಿಶ್ಚಯದಿ
ತಿಳಿದು । ಸುಖಿಯಾಗುವದನುಳಿದು ನೀ । ಕುದಿಯದಿರು ॥ ೯ ॥

ಪುಸಿಯಾದ ಸಂಸಾರವೆಂದೊಡನೆ ಬೆದರದಿರು ।
ಹಸನಾಗಿ ತಿಳಿದುಕೋ ಪುಸಿಯ ರೀತಿಯನೀಗ ।
ಹಸನಾಗಿ ತೋರುವದು । ಎಸೆದು ತಾನನಿಸುವುದು ।
ಮಿಸುಪ ಕನಸಿನಲಿರ್ಪಬಾಳುವೆಯ ತೆರದಿ । ಬೆಸನಾಗಿ ।
ತಿಳಿದುಕೊ ತೋರದಲೆ ಅನಿಸದಲೆ । ಹೆಸರಿಲ್ಲದಿರುತಿರುವ
ದಾ ಸತ್ಯವಸ್ತು । ಅದನು ನೋಳ್ಪುದ ಬಿಟ್ಟು ।
ಇದಕೆ ನೀ ಮನಸಿಟ್ಟು । ಹದಗೆಡಿಸಿ ಬಿಟ್ಟೆ ನೀ ನಿನ್ನ ಮರೆತು ॥
ಅದರಿಂದ ತಿಳಿ ಈಗ ಅದೆ । ನಿರ್ವಿಕಲ್ಪವೆ ನಾನು ಒದಗುವೀ–
ಸುಖದುಃಖವೆನಗಲ್ಲವೆಂದರಿತು । ಮುದವ ಹೊಂದುವುದುಳಿದು ।
ಕುದಿಯದಿರು ॥ ೧೦ ॥

ತನ್ನ ತಾನರಿಯುವದು । ಘನ್ನ ಕಾರ್ಯವದಲ್ಲ । ಬನ್ನ ಬಡುತಿರುವ ।
ಈ ಬಾಳಿಗಿಂತಲೂ ಸುಲಭ ಅನ್ಯವನು ತಿಳಿಯುವದು ಕಷ್ಟವಾಗಿ
ಹುದಯ್ಯ । ನಿನ್ನ ನೀ ತಿಳಿಯುವದಕಿಂತ । ಜನ್ಮಮರಣಗಳಿಂದ
ಬಿಡುಗಡೆಯ ಹೊಂದುವಿ । ನಿನ್ನ ಮೂಲವ ತಿಳಿಯೆ ನೀ
ಜಾಣ್ಮೆಯಿಂದ ॥ ಅನ್ಯಮಾರ್ಗವದಿಲ್ಲ ಮೋಕ್ಷವನು ಪಡೆವುದಕೆ ।
ಇನ್ನೇನು ಬೇಕಿಲ್ಲ ಜ್ಞಾನ ಒಂದೇ ಸಾಕು । ಎನ್ನುತಿಹ ಶ್ರುತಿಯ
ನುಡಿಯನ್ನು ಅನುಭವಿಸಿ ನೀ ಧನ್ಯನಾಗುವದುಳಿದು
ಅನ್ಯವಿಷಯಂಗಳಲಿ । ಕುದಿಯದಿರು ॥ ೧೧ ॥

ಜೀವನಾನೆನ್ನುವಾ ಭಾವನೆಯನುಳಿದು ನೀ ಆವ ಕಲ್ಪನೆ ಇಲ್ಲದಿಹ
ಸ್ಥಿತಿಯೇ ಆದ । ದೇವ ನಾನಿಹೆನೆಂದು । ಪಾವನಾತ್ಮವದೆಂದು ।
ಈ ವಿಧದಿ ಮನದಂದು । ಸಾವಿನಂಜಿಕೆಯಳಿದು ।
ಭಾವನಾತೀತನಾಗಿರ್ದ ನಿನ್ನಯ ನಿಜವನಾವಗಂಧ್ಯಾನಿಸುತ ॥

ದೇವಗುರು ಶಂಕರನ। ಪಾವನಂಘ್ರಿಯ ನೆನೆದು ಆವಗಂ
ಸುಖಿಯಾಗಿ ಬಾಳುವದನುಳಿದು ನೀ। ಕುದಿಯದಿರು।
ಎಲೆ ಮನವೆ ಸಿರಿಸಂಪದಗಳನು ಬಯಸಿ ॥ ೧೨ ॥

– ದೇವ

**ರಾ. ಭೈರವಿ** **೧೦೫** **ತಾ. ತ್ರಿವಟ**

(ಚಾಲ – ಪಿಯು ಪಿಯು ಬೋಲ ಎಂಬಂತೆ)

ತಿಳಿ ತಿಳಿ ನೀ। ತಿಳಿ ತಿಳಿ ನೀ।
ಅಳಿಯದಾಗಿಹ ಸ್ಥಿರಪದವಾ। ॥ ಪ ॥

ತೋರಿ ಅಡಗುವ ಜಗಕಾಧಾರ।
ತೋರಿಕೆ ಅಡಗಲು ತಾನುಳಿವಾ।
ಪಾರಮಾರ್ಥವೆ ತಾನೆನುತಾ ॥ ೧ ॥

ಅನಿಸಿಕೆಯೆಲ್ಲವು ಪುಸಿಯಿಹುದೆಂದು।
ಘನಾನುಭವವಾ ನೀ ಪಡೆಯುತಲಿ।
ಅನುದಿನ ಮನನವ ಮಾಳ್ಪುದು ನಿನ್ನೊಳು।
ಅನುಭವವಾ ದೃಢಪಡಿಸೈ।
ವಿನುತ ಶಂಕರಗುರುನುಡಿಯಾ ॥ ೨ ॥

– ದೇವ

**ರಾ. ಕ. ಭೈರವಿ** **೧೦೬** **ತಾ. ತ್ರಿವಟ**

(ಚಾಲ – ರಣ ಧೀರರಾ ಸುಕುಮಾರ ನೀನು ಎಂಬಂತೆ)

ಅರಿ ಬೇಗನೇ ಪರಮಾತ್ಮ ನೀನೈ
ಪರತತ್ವವಾ। ತ್ವರಿತದಲಿ ತಿಳಿಯೊ ॥ ಪ ॥

ಮೂರು ತಾಣಗಳ ಮೀರಿ ಗೋಚರಿಪ।
ತೋರುತಿಹ ಈ ದೇಹಾದಿಗಳಿಗೆ ॥
ಬೇರೆಯಾಗಿಪುದೆ ಪರಮಪದವು।
ಧೀರ ನೀನರಿಯೊ ಅದೆ ನಾನು ಎಂದು ॥ ೧ ॥

ಕೋಶಪಂಚಕವ ಲೇಸಾಗಿ ಕಳೆದು ।
ವಾಸನೆಯ ಪಾಶವನೆ ಹರಿದೊಗೆದು ॥
ಕ್ಲೇಶ ಪಡುವದನು ತ್ಯಜಿಸಿ ಮುದದಿ ।
ನಾಶರಹಿತಾದ ಪದವು ತಾನೆಂದು ॥ ೨ ॥

ಜನನಮರಣಗಳಿಗಾಚೆಗಿರುವಂಥ ।
ಮನವಾಣಿಗಳಿಗೆ ನಿಲುಕದಿರುವಂಥ ॥
ಘನಪದವು ಇದುವೆ ಪರಮಾತ್ಮನೈ ।
ಅನುನಯದಿ ಪೇಳ್ವ ಗುರುಶಂಕರಾರ್ಯ ॥ ೩ ॥

– ದೇವ

## ೧೦೭

(ಚಾಲ – ಜಿಯೇಜಾ ಎಂಬಂತೆ)

ಬೇಗ ತಿಳಿಯ್ಯೆ । ಶುದ್ಧ ಮನದಿ ।
ಶ್ರೀ ಗುರು ಪೇಳ್ದ ಬೋಧಾ ।
ನೀಗುವಿ । ಭವದಾ । ಬಾಧಾ ।
ಸ್ವರೂಪಾ । ನಂದ ಪಡೆಯುವಿ ನೀ । ಸ್ವರೂಪಾ ॥ ಪ ॥

ಪರಮಸತ್ಯದ ತತ್ವವರಿಯಲು ।
ಮರಣಭಯವಾ ನೀಗುವೀ ॥
ಕರುಣಿ ಗುರುವಿನ ಚರಣಕಮಲದಿ ।
ಬೆರೆತು ಸುಖಿಸುವಿ ನೀ । ಸ್ವರೂಪಾ ॥ ೧ ॥

ಅರಿಯೊ ನೀ ಪರಮಾತ್ಮನೆಂಬುದ ।
ಪರಮ ಶಾಂತಿಯ ದೊರಕಿಸೀ ॥
ಗುರುಶಂಕರನಾ । ಬೋಧದಾ ।
ಸವಿಯುಂಡು ತಣಿಯುವಿ ನೀ ॥ ೨ ॥

– ದೇವ

## ೧೦೮
(ಚಾಲ – ಸುನೋ ಸುನೋ ಎಂಬಂತೆ)

ತಿಳೀ ತಿಳೀ । ಅನುಭವದಾಳಾ।
ಪೇಳ್ವೆ ಸ್ವಾನಂದವ ನೀ ಕೇಳಾ ॥ ಪ ॥

ತನುಮನಕರಣಕೆ ಮೀರಿರುವಾ ।
ಸನಾತನಾ ಸಂಪೂರ್ಣಘನಾ ॥
ನೀನೆ ಆನಂದಾತ್ಮನದೆಂದು ॥ ೧ ॥

ದೇಹಾದಿಗಳೇ ನಾನೆಂಬ ।
ಮಹಾದೃಢದ ಈ ಮತಿಯಂತೆ ॥
ನೀನೆ ಆತ್ಮಸ್ವರೂಪನು ಎಂದು ॥ ೨ ॥

ಗಟ್ಟಿಗೊಳಿಸು ಈ ವಿಷಯಾ ಮನದೋಳ್ ।
ಎಟ್ಟಿ ಮನಸಿನಾ ನಷ್ಟವ ಮಾಡಿ ॥
ಕೆಟ್ಟಾ ಬಾಳಿದು ಪುಸಿ ಎಂಬುದನು ॥ ೩ ॥

ಜೀವನ್ಮುಕುತಿ ಆನಂದ ।
ದೇವನೆ ತಾನೆನ್ನುವದೇ ಚಂದ ॥
ಭವಹಾರಿ ಶಂಕರನ ಜ್ಞಾನಾ ॥ ೪ ॥

**– ದೇವ**

## ೧೦೯
(ಚಾಲ – ಗಮ್‌ಕೊ ಪಸಾನಾ ಕಿಸಕೊ ಸುನಾಯೆ ಎಂಬಂತೆ)

ನಿನ್ನ ಸ್ವರೂಪ ಚೈತನ್ಯರೂಪ । ಆನಂದರೂಪ । ನೀ ನಿರ್ವಿಕಲ್ಪ ॥ ಪ ॥

ಬುದ್ಧಿ ಮನಸುಗಳುಹೊದ್ದದ ತಾಣ ॥
ನಿದ್ರಾದ್ಯವಸ್ಥಾ ಮೀರಿರ್ದ ಸ್ಥಿತಿಯೇ । ನಿನ್ನ ಸ್ವರೂಪ ॥ ೧ ॥

ನಾನಾತ್ವವೆಲ್ಲವ ಪುಸಿ ಎಂದು ಪೇಳ್ದ ॥
ನೀನೇ ಪರಮ ಶ್ರೀಶಂಕರರೂಪ ॥ ೨ ॥

**– ದೇವ**

## ೧೧೦

(ಚಾಲ – ಧೀರೇಸೆ ಆಜಾರೆ ಎಂಬಂತೆ)

ಹೃದಯಾಧಿವಾಸಾ ಚಿನ್ಮಯ ಪಾವನ। ಅವನೆ ದೇವಾಧಿದೇವ।
ಮೂರು ಕಾಲದ ಸಾಕ್ಷಿ ಪರಮಾತ್ಮನೇ।
ಅವನೇ ಜಗದಾಧಿವಾಸ ॥ ಪ ॥

ಆಕಾರದೂರ ಏಕಾಂತಪೂರ।
ಏಕಾಂತಘನಪೂರ। ತಾ ನಿರ್ವಿಕಾರ ಮನೋವಾಣಿದೂರ।
ಮನೋವಾಣಿಗೆದೂರ ॥
ಜಗಕೆಲ್ಲ ಆಧಾರ ತಾನಾಗಿಹ। ಇವನೆ ಪರಮಾತ್ಮ ಈಶ
ಹೃದಯಾಧಿವಾಸ ॥ ೧ ॥

ಮನವೆಲ್ಲ ಉಡುಗಿ ಅನಿಸಿಕೆಯಡಗಿ।
ಅನಿಸಿಕೆ ತಾನಡಗಿ। ತನಿನಿದ್ರೆಯಲ್ಲಿ ಇವು ಎಲ್ಲ ಮುಳುಗಿ ॥
ತಾನೇ ತಾನಾಗಿರ್ದ ಚಿನ್ಮಾತ್ರನೆ।
ಅವನೇ ಆನಂದರೂಪ। ಹೃದಯಾಧಿವಾಸ ॥ ೨ ॥

ಅವನೇ ನಾನೆಂದು ತಿಳಿ ಈಗ ನಿಂದು।
ಜಗವೆಲ್ಲ ಕನಸೆಂದು ಪರಮಾರ್ಥ ಸತ್ಯ ಶ್ರೀನಾರಾಯಣ ॥
ಇವನೇ ಗುರುಶಂಕರೇಶ। ಹೃದಯಾಧಿವಾಸ ॥ ೩ ॥

**– ದೇವ**

## ೧೧೧

(ಚಾಲ – "ಓ ದೂರ ಜಾನೆವಾಲೆ" ಎಂಬಂತೆ)

ಚೈತನ್ಯವೊಂದೆ ಸತ್ಯ। ಈ ಜಗವೆಲ್ಲ ಭ್ರಾಂತಿ ಮಿಥ್ಯ।
ಅನಿಸುವಿಕೆ ಇಲ್ಲದಿರುವಾ। ಮನವಾಣಿ ಮೀರುತಿರುವಾ ॥
ಘನವಾದ ಸ್ವಪ್ರಭಾವ। ಅದೆ ನೋಡು ಆತ್ಮಭಾವಾ ॥ ೧ ॥

ನಿಜವಾದ ಚೇತನವದು। ಅಜರಾಮರಾಗಿರುವದು।
ಅದೆ ನೀನು ಎಂದು ತಿಳಿಯೈ। ಇದು ಎಲ್ಲ ಕನಸುಮಿಥ್ಯ ॥ ೨ ॥

ಇದು ನೋಡು ಶಾಸ್ತ್ರಸಾರಾ। ಇದನರಿತ ಮನುಜ ಧೀರ।
ಇದನೊಂದೆ ತಿಳಿದುಕೊಳ್ಳೈ। ಇದು ಶಂಕರಾರ್ಯಬೋಧ ॥ ೩ ॥

**– ದೇವ**

## ೧೧೨

(ಚಾಲ – ಜೀಯಾ ಬೇಕರಾರ ಹೈ ಎಂಬಂತೆ)

ನಿರ್ವಿಕಲ್ಪರೂಪವೇ ಆನಂದರೂಪವೇ ।
ಸರ್ವಾಧಾರ ಚಿನ್ನಭಾ ನೀನೆ ಆ ಸ್ವಯಂಪ್ರಭಾ ॥ ಪ ॥

ನೀ... । ಅನುಭವದಿ ಮನಗಾಣುವದೀ ।
ಭಾವಾತೀತ ಬೋಧವಾ । ನಿತ್ಯಾನಂದದಾತ್ಮವಾ ॥
ಕಲ್ಪನೆ ಎರಡರ ಮಧ್ಯದೊಳಿರುವ ಕಲ್ಪನೆ ಸಾಕ್ಷಿರೂಪವೇ ।
ಪೂರ್ಣಾನಂದ ನೀನಿಹೆ ॥ ೧ ॥

ಈ... ತೋರಿಕೆ ಎಲ್ಲಾ ಕಲ್ಪಿತಾ ।
ಮನಸಿನದೆಲ್ಲ ಜೀವಿತಾ ।
ಮನವೇ ಚಿತ್ತಾಕಾಶ ತಾ ॥
ಕನಸಿನ ಪರಿ ಈ ತೋರಿಕೆ ಮಿಥ್ಯಾ ।
ಚಿನುಮಯ ಮಾತ್ರ ನೀನಿಹೆ ।
ಶಂಕರಗುರುವಿನ ಬೋಧವೇ ॥ ೨ ॥

**– ದೇವ**

## ೧೧೩

(ಚಾಲ – ಘರ ಆಯಾ ಮೇರಾ ಪರದೇಶೀ ಎಂಬಂತೆ)

ತಿಳಿ ಮನದಾಚೆಯ ಪದವನು ನೀ ।
ತಿಳಿ ಅದೆ ದೇವನು ಇರುತಿಹೆ ನೀ ॥ ಪ ॥

ಅದು ಕೊನೆಯಾಚೆಗೆ ಬೇರಿಲ್ಲ ।
ಅದು ಮನಸಿಗೆ ನಿಲುಕುವದಲ್ಲ ।
ಅದನನುಭವದಲಿ ತಿಳಿಯಲ್ಲ ।
ಬಿಡು ಮನಸಿನ ಗೊಡವೆಯನೆಲ್ಲ ॥
ಇದೆ ಜ್ಞಾನಾಗ್ನಿಯು ಸುಡುತಿಹುದೋ ।
ಒದಗಿದ ಕರ್ಮದ ಕಾಷ್ಠಗಳ ॥ ೧ ॥

ಮನವಡಗಿದ ಪದ ಪರಿಚಯವ ।
ತನಿನಿದ್ರೆಯ ಮೀರಿದ ಸ್ಥಿತಿಯ ।
ಅನುಭವದಲಿ ತರುವುದೆ ಯೋಗ ।
ಅದನೇ ಯತ್ನದಿ ಸಾಧಿಸುತಾ ॥

ನನಸಿನಲೇ ಗುರು ಮುಖದಿಂದ ।
ಕೇಳಿ ವಿವೇಕದಿ ತಿಳಿ ಬೇಗಾ ॥ ೨ ॥

ಎಚ್ಚರವಿದು ತಿಳಿ ಕನಸೆಂದು ।
ಅಚ್ಚಳಿಯದ ಸ್ಥಿತಿ ನಾನೆಂದು ।
ನಿಚ್ಚಳದಲಿ ನಿಶ್ಚಯಿಸುವದು ।
ತುಚ್ಛದ ತೋರಿಕೆ ಎಂದು ತಿಳೀ ।
ಸಚ್ಚಿತ್‌ಶಂಕರ ಬೋಧವನಾ ॥ ೩ ॥

– ದೇವ

## ೧೧೪

(ಚಾಲ – ಬಿಗಡೀ ಬನಾನೆ ವಾಲೆ ಎಂಬಂತೆ)

ಅರಿ ನಿನ್ನ ನಿಜವಾ ಆನಂದಘನವಾ ।
ಚೈತನ್ಯದಿರವಾ । ಮರಣರಹಿತವಾ ಆತ್ಮಾನುಭವ ॥ ಪ ॥

ಮನವಾಣಿ ಮೀರಿ । ತನು ಮೂರ ಮೀರಿ ।
ಕಲ್ಪನ ತೀರೀ ತಾ ನಿರ್ವಿಕಾರಿ ॥
ಅದೇ ನೀನು ತಿಳಿಯೈ ಇದು ನೀನಲ್ಲ ॥ ೧ ॥

ಜಗವಿದು ಕನಸೋ ಪುಸಿಯೆಂದೆಣಿಸೋ ।
ಮನದಿ ವಿವೇಕವ ಮಾಡಿ ನಿಶ್ಚಯಿಸೋ ॥
ಶಂಕರಬೋಧಾ ಇದುವೇ ಮೋದಾ ॥ ೨ ॥

– ದೇವ

## ೧೧೫

(ಚಾಲ – ಜಿಂದಗಿ ಪ್ಯಾರಕಿ ದೋ ಚಾರ ಘಡೀ ಎಂಬಂತೆ)

ಎಂದಿಗೂ ಪೋಗದ ಈ ನಿತ್ಯಸುಖ ನೀ ನೋಡೋ ।
ದೃಢವಾಗಿಹ ಈ ತನುಭಾವನೆಯಾ ಹೊರದೂಡೋ ॥ ಪ ॥

ಅರಿ ಮರ್ಮವ ಕಡಿ ಕರ್ಮವ ಬಿಡು ನಿನ್ನಭಿಮಾನ ॥
ಭ್ರಮೆ ಬೇಡಿನ್ನು ಇದೋ ತಿಳಿಯೊ ನಿನ್ನ ನಿಜತಾಣ ॥ ೧ ॥

ಗುರುವಚನದಿ ಪರಮಾತ್ಮನ ನೀ ತಿಳಿಯಲು ಸಾಧ್ಯ ॥
ಮರೆತರೆ ಈ ನುಡಿಯಾ ತಿಳಿಯುವದೇ ದುಸ್ಸಾಧ್ಯ ॥ ೨ ॥

ಕಲ್ಪನೆ ಎರಡರ ನಡುವಿರುತಿಹ ಇರುವಿಕೆ ನೀನೇ ॥
ಕೇಳೈ ಸತ್ಯವಿದೋ ನೀನಿಹೆ ಆ ಚಿನುಮಯನೇ ॥ ೩ ॥

ಬರಿ ಅರಿವೇ ನಿನ್ನಿರವದು ಆನಂದದ ರೂಪ ।
ಬೋಧಿಪ ನಿರುತದಿ ಶಿವಶಂಕರ ಗುರುವರಭೂಪ ॥ ೪ ॥

**– ಸದಾಶಿವ**

## ೧೧೬

(ಚಾಲ – ಪರದೇಶಿ ಬಾಲಮಾ ಬಾದಲವಾಯಾ ಎಂಬಂತೆ)

ಇದೇ ನೋಡು ನಿನ್ನ ನಿಜವಾದ ಸ್ವರೂಪ । ಜೀವ ।
ಇದೇ ಸಕಲ ಜಗದ ಕಾರಣಾ । ಬ್ರಹ್ಮ ಪೂರಣ ॥ ಪ ॥

ಅನಿಸುವಿಕೆಯು ಇಲ್ಲದಿರುವಾ । ತೋರಿಕಿಲ್ಲದಾ । ಬರಿ ಇರವಿದೇ ।
ಮನಸಿಲ್ಲದೆ ಬೆಳಗುತಿರುವ । ನಿದ್ರೆಹೊದ್ದದಾ । ಬರಿ ಅರಿವಿದೇ ।
ಅನುಭವದ ರೂಪನಾಗಿ ಉಳಿಯುವಾ । ಎರಡನೆಯದಿಲ್ಲದ ।
ಘನ ನಿರಾಕಾರವೇ ॥ ೧ ॥

ವಿಷಯಜನಿತ ದುಃಖಸುಖದ ಸುಳಿವು ತೋರದ ।
ಘನಾನಂದವೇ । ಶೇಷ ಮಾತ್ರನಾಗಿ ಸದಾ ಶಾಂತಿರೂಪದ ।
ನಿರ್ವಿಕಾರ ನೀ । ಹಸನಾಗಿ ತಿಳಿದುಕೊಳ್ಳು ಬೋಧವಾ ।
ನೀನದೆ ಎಂಬುದ । ಈ ಸತ್ಯಸ್ವರೂಪವೇ ॥ ೨ ॥

ಸ್ವರೂಪಾತ್ಮ ಮಾತ್ರ ಪರಮಸತ್ಯನಾಗಿಹ । ನಿತ್ಯನಾಗಿಹ ।
ಬರೀ ತೋರಿ ಅಡಗುತಿರುವ ಜಗವು ಭ್ರಾಮಕಾ ।
ಮಿಥ್ಯಾಭಾಸಕ । ಗುರುವರ್ಯ ಶಂಕರಾತ್ಮಬೋಧವಾ ।
ವೇದಾಂತಸಾರವಾ । ಪರಮಾತ್ಮ ಜ್ಞಾನವಾ ॥ ೩ ॥

**– ದೇವ**

## ೧೧೭

(ಚಾಲ – ಹವಾಮೆ ಉಡತಾ ಜಾಯೇ ಎಂಬಂತೆ)

ಚೈತನ್ಯನೆ ನೀನಿಹೆಯೆಂದು । ಜಡದೇಹವು ನೀನಲ್ಲೆಂದು ।
ಈ ಜಡದೇಹವು ನೀನಲ್ಲೆಂದು ಇದ ತಿಳಿಯೋ ತಿಳಿಯೋ ॥ ಪ ॥

ಕಲ್ಪನೆರಹಿತ ಸ್ಥಿತಿ ನೀನಿರುವಿ । ನಿತ್ಯಾನಂದನು ನೀ ।
ಮಿಥ್ಯಾನುಭವ ಈ ಜಗ ನಿನ್ನೋಳ್ ।
ಸತ್ಯಸ್ವರೂಪನೇ ನೀ । ನಿತ್ಯಮುಕ್ತನೆ ॥ ೧ ॥

ಎಚ್ಚರಕನಸು ನಿದ್ರೆಗಳನ್ನು । ಅರಿಯುವ ಸಾಕ್ಷಿರೂಪನೇ ।
ಅರಿವಿನ ಅರಿವೇ ನೀನಿಹೆಯೆಂದು ।
ಬೋಧೆಯ ಮಾಡಿದ ಧುರುಂಧರಸನ್ನುತ ಶಂಕರ ಗುರುವರ ॥ ೨ ॥

– **ಜಯಮ್ಮ**

## ೧೧೮

(ಚಾಲ – ವಸಂತಮಾಸ ಓಡಿ ಬಂದಿದೆ ಎಂಬಂತೆ)

ಓ... ನಿರ್ವಿಕಲ್ಪ ಆತ್ಮನೀನಿಹೆ । ಆತ್ಮ ನೀನಿಹೆ ।
ಜಗವೆಲ್ಲ ತುಂಬಿ ನಿಂದಿಹೆ । ಎಲ್ಲ ತುಂಬಿ ನಿಂದಿಹೆ ॥ ಪ ॥

ಮೆಲ್ಲಮೆಲ್ಲನೆ ತಿಳಿದು ನೀನೆಲ್ಲ ।
ಹೊಂದು ಸೌಖ್ಯವ ತಾಪವ ನೀಗೀ ।
ಪರಮಾನಂದದಾ ನಿಧಿ ನೀನಾಗಿಹೆ ।
ಅರಿನಿನ್ನನು ನೀ ॥ ೧ ॥

ನಿತ್ಯಮುಕ್ತನೆನುತ । ಆನಂದ ಸವಿಯುತ ।
ಜವದಿ ಅರಿಯೋ ಮನುಜ ನೀ ।
ಶಂಕರನ ಬೋಧವಾ ॥ ೨ ॥

– **ಜಯಮ್ಮ**

## ೧೧೯

**ರಾಗ. ಮಾಂಡ** **ತಾ. ಕವಾಲಿ**

ತಿಳಿ ಸತ್ಯರೂಪವ । ಪರಮಾನುಭವವ ।
ಸುವಿಚಾರದಿಂದ । ಯೋಚಿಸು ಜೀವಾ ॥ ಪ ॥

ನಾ ನೀನು ಎನುವಾ । ಇದು ಅದು ಎನುವ ।
ನಾನಾತ್ಮಭಾವಾ ಪುಸಿಯಿದು ಜೀವಾ ॥
ಏನೊಂದು ಮಿಲ್ಲದೆ ತಾನುಳಿದಿರುವ ।
ಸ್ವಾನುಭವಾತ್ಮಾ ಸತ್ಯನಾಗಿರುವ ॥ ೧ ॥

ಕರ್ತೃವೆನಿಸದ ಭೋಕ್ತೃವೆನಿಸದ ।
ಅನಿಸಿಕೆಯಳಿದಾ ನಿತ್ಯನಿರಂಜನ ॥
ಮಾಯಾವಿಲಾಸದಿ ತೋರುವನೀಪರಿ ।
ಕನಸಿನೊಲಿದುವೇ ಪುಸಿ ಈ ಜಗವು ॥ ೨ ॥

ಅವಿಚಾರಗಳಿಗೆ ಬೇರಾಗಿ ತೋರೇ ।
ಸುವಿಚಾರದಿಂ ನೋಡೇ ತಿಳಿವುದು ಇದುವೇ ॥
ಅದೇ ಪರಮಾತ್ಮನೇ ನೀನಿರುವಿಯಿದೋ ।
ಗುರು ಶಂಕರಾರ್ಯನ ವರಬೋಧವಿದೋ ॥ ೩ ॥

– ದೇವ

## ೧೨೦

(ಚಾಲ – "ಯಹೀ ಚಾಂದ ಹೋಗಾ" ಎಂಬಂತೆ)

ಇದೇ ಕೇಳು ಜ್ಞಾನ । ಇದೇ ಸ್ವಾತ್ಮಭಾನ ।
ಇದೇ ಸೌಖ್ಯ ತಾಣ । ತಿಳೀ ನೀನೆ ಜಾಣಾ ॥ ಪ ॥

ಶರೀರಾದಿ ಸಂಘಾತವೆಲ್ಲ ವಿಕಾರಿ ।
ಬರೀ ತೋರಿಕೆ ಸ್ವಪ್ನವೇ ಕೇಳ್ ವಿಚಾರಿ ॥
ಅರೀ ನೀ ಸ್ವರೂಪಾ ಶರೀರಾದಿ ಭಿನ್ನ ॥ ೧ ॥

ಸದಾ ನಿರ್ವಿಕಾರ ಪರಾನಂದಸಾರ ।
ಈ ಜಾಗರ ಸ್ವಪ್ನ ನಿದ್ರಾದಿ ದೂರ ॥
ಅದೇ ನೀ । ಇದೇ ಕೇಳ್ । ಸ್ವರೂಪಾತ್ಮಜ್ಞಾನ ॥ ೨ ॥

ತಿಳೀ ನಿನ್ನ ನೀ ಈ ವಿಚಾರಾಕ್ಷಿಯಿಂದ ।
ಇದೇ ಮೋಕ್ಷವೆಂದ ಸ್ವರೂಪಾನಂದ ॥
ಇದೇ ಶಂಕರಾರ್ಯಾ ನಿಜಾನಂದವೆಂದ । ॥ ೩ ॥

– ದೇವ

## ೧೨೧

**ರಾಗ. ಆಠಾಣಾ** **ತಾ. ತ್ರಿವಟ**

ಎಂದೂ ಬಂಧವಿಲ್ಲ ಆತ್ಮಗೆ ।
ಬಂಧದ ಕಲ್ಪನೆ ಮಿಥ್ಯವಿದೆಲ್ಲ ।
ಮಂದರ ನುಡಿಯಿದು ಈ ಸಂಸಾರ ॥ ಪ ॥

ನಿತ್ಯಮುಕ್ತನೇ ತಾನಾದವಗೆ।
ಮಿಥ್ಯದ ಕಲ್ಪನೆ ಬರುವದೆಂತೋ॥
ತಥ್ಯವಿಲ್ಲದ ಮಾತಿನ ಮಾಲೆ।
ಮತ್ತೆ ಬಂಜೆಯಾ ಮಗನೆಂಬುವವೋಲ್ ॥ ೧ ॥

ಆತ್ಮನೆ ತಾನೆಂಬನುಭವ ಪಡೆಯದೆ।
ಮತ್ತೆ ಶಬ್ದ ಮಾತ್ರವನರಿತವಗೆ॥
ಸುತ್ತಿಕೊಳ್ಳುವುದು ಸಂಶಯವಿದುವೆ।
ಅನುಭವದೊಳಗೇನಿಲ್ಲ ವಿಕಲ್ಪ। ॥ ೨ ॥

ಭಾನುವಿಗುಂಟೇ ಉದಯಾಸ್ತಗಳು।
ಮಾನವಕಲ್ಪನೆಗಳು ತಾನೆಲ್ಲ॥
ತಾನೇ ತಾನಾದವಗಿನ್ನು।
ಹೀನಭವದ ಬಾಧೆಯುತಾನುಂಟೇ ॥ ೩ ॥

ಅನುಭವರೂಪನು ತಾನಾದಾಗ।
ಅನುಭವ ಬರುವದು ಈ ನುಡಿ ಕೇಳೈ॥
ಮನವಾಣಿಗೆ ಮೀರಿದ ಸ್ವಾತ್ಮನು ನೀ।
ಚಿನುಮಯ ಶಂಕರತಾನಾದವಗೇ ॥ ೪ ॥

– **ದೇವ**

## ೧೨೨

**ರಾ. ಭೈರವಿ** **ತಾ. ದಾದರಾ**

ಜ್ಞಾನಸುಧೆಯ ಪಾನಮಾಡಿ। ಸ್ವಾನುಭವದಿ ಲೀನನಾದೆ।
ಹೀನ ಭವದ ತಾಪವೆನಗೆ। ಬಾಧಿಸುತಿರೆ ಗುರು ನೀಡಿದ ॥ ಪ ॥

ಜೀವನ ಸುಖದುಃಖದಾ।
ಭಾವ ಜೋಲಿಗಳನು ಮರೆದು॥
ದೇವ ನಾನೆ ಎಂದು ತಿಳಿದು।
ಪಾವನಾತ್ಮನೊಳಗೆ ಬೆರೆದು ॥ ೧ ॥

ನಾನು ನೀನು ಎಂಬ ಭೇದ।
ಏನು ಮೋಜು ಮಾಯವಾಯ್ತು॥

ಕಾಣದಾಯ್ತು ಜೀವಭಾವ।
ಜ್ಞಾನಬೋಧದಾ ಪ್ರಭಾವ ॥ ೨ ॥

ಭಾನ ಮರೆದು ದೇಹಮನದ।
ಜ್ಞಾನಗೀತೆಗಳನು ಪಾಡಿ ॥
ತಾನೆ ತಾನಾಗಿರುವ।
ಜ್ಞಾನಿ ಗುರುವಿನೊಳಗೆ ಕೂಡಿ ॥ ೩ ॥

ಕಲ್ಪನಾವಿಲಾಸ ಪೋಗಿ
ಅಲ್ಪನೆಂಬ ಮತಿಯ ನೀಗಿ ॥
ಕಲ್ಪನಾತೀತನಾದನಲ್ಪನಾದ ಶಂಕರನಾ ॥ ೪ ॥

**– ದೇವ**

## ೧೨೩

**ರಾ. ಮಾಂಡ** **ತಾ. ಕವಾಲಿ**

(ಚಾಲ – ಉಸಳತ ತೇಜಭರೆ ಗಗನಾತ ಎಂಬಂತೆ)

ನಿನ್ನೊಳು ನೀ ತಿಳಿಯೊ ಮನುಜ ॥ ಪ ॥

ಪರಮಾತ್ಮನೆ ನೀನಿರುವಿಯೊ ಮನುಜಾ।
ಅರಿತು ನೋಡು ನಿನ್ನಯ ನಿಜವಾ ॥
ಮರೆತಿರುವಿಯೊ ನೀ ನಿನ್ನಿರುವಿಕೆಯಾ।
ತೋರುವ ದೇಹವು ನಾನಲ್ಲೆಂದು ॥ ೧ ॥

ನನಸಿನ ದೇಹವು ಕನಸಿನೊಳುಂಟೆ।
ನೆನಸಿ ನೋಡು ನಿನ್ನಿರುವಿಕೆ ಸಮವು ॥
ಮನಸಿನಿಂದ ನೀ ತಿಳಿಯೀ ವಿಷಯವ।
ನನಸಿನ ದೇಹವು ನಾನಲ್ಲೆಂದು ॥ ೨ ॥

ಗಾಢನಿದ್ರೆಯಲಿ ಅಡಗಿತು ಬುದ್ಧಿಯು।
ಗಡನೆ ನೋಡು ನಿನ್ನಿರುವಿಕೆಯಾ ॥
ಜಡದೇಹವು ಮನಬುದ್ಧ್ಯಾದಿಗಳಿಂ।
ಬಿಡಿಯಾದಿರುವಿಕೆಯುಳಿವುದು ನೀನೇ ॥ ೩ ॥

ಮೂರು ಜಾಗೆಯಲಿ ನಿರುತದೊಳಿರುತಿಹ।
ಇರವರಿವಾನಂದವೆ ನೀನೈ॥
ಮರೆತು ಇದನು ನೀ ಬರಿದೇ ಮಿಡುಕುವಿ॥
ದೊರಕುವದೇ ಸುಖ ಹೊರಗೆ ಹುಡುಕಲು ॥ ೪ ॥

ತೋರಿಕೆ ಅನಿಸಿಕೆಗಳು ಕ್ಷಣಭಂಗುರ।
ಮರಣರಹಿತ ಪರವಸ್ತುವು ನೀನೆ॥
ಅರಿವೇ ಪರಬ್ರಹ್ಮವು ತಾನೆಂದು।
ವರಶ್ರುತಿ ಸಾರಿತು ಬ್ರಹ್ಮವೆ ನೀನೈ ॥ ೫ ॥

ಗುರುವಿನ ಕರುಣದಿ ತಿಳಿಯೀ ವಿಷಯವ।
ಮರುಳಾಗದಿರೈ ಮಾಯಾಕಾರ್ಯಕೆ॥
ಮರಣಜನನಗಳ ನೀಗುತಲಿ ವರ।
ಗುರುಶಂಕರನಾ ಪದವಿಯ ಪಡೆಯುವಿ ॥ ೬ ॥

**– ದೇವ**

## ೧೨೪

**ರಾ. ಸೊಹನಿ** **ತಾ. ಝಂಪಾ**

ಹೇಗೆ ಸೇವಿಸಲಯ್ಯ ಶ್ರೀ ಗುರುವೆ ನಿನ್ನ।
ಆಗಮ ಪುರಾಣಾದಿಗಳಿಗೆ ನಿಲುಕದನ ॥ ಪ ॥

ಯಾಗದಿಂ ಸೇವಿಪೆನೆ ಜನ್ಮಾದಿ ವಿರಹಿತನ।
ಯೋಗದಿಂದೊಲಿಸುವೆನೆ ಏಕನದ್ವಯನ॥
ಕೂಗಿ ಕರೆಯುವೆನೆ ನಾನಾತೀತನಾದವನ।
ಬಾಗಿ ಭಜಿಪೆನೆ ಸಕಲಕಿಂಬಾಗಿರುವನ ॥ ೧ ॥

ಸ್ಮರಣೆಯನು ಮಾಡುವೆನೆ ನಾಮವೇನಿಲ್ಲದನ।
ಸ್ಥಿರಮನದಿ ಧ್ಯಾನಿಪೆನೆ ರೂಪಿಲ್ಲದವನ॥
ಬಿರುದುಗಳ ಹೊಗಳುವೆನೆ ನಿರ್ಗುಣಚರಿತ್ರನ।
ಶರಣು ಪೊರೆ ಎಂಬೆನೇ ಸತತ ನಿಷ್ಕ್ರಿಯನ ॥ ೨ ॥

ಶ್ರವಣಾದಿಗಳ ಮಾಳ್ಪೆನೇ ಶ್ರುತಿಗೆ ದೂರನಾ
ಸುವಿಚಾರಗೈವೆನೇ ಮತಿದೂರನಾ॥

ಕವಿತೆಯಿಂದ ಬಣ್ಣಿಪೆನೆ ಭಾವಕ್ಕೆ ನಿಲುಕದನ।
ತವ ಸೇವೆ ಯೆನಗೆಂತೂ ? ನಾರಾಯಣಾ ॥ ೩ ॥

– ಶ್ರೀ ಶಂಕರ

## ೧೨೫

(ಚಾಲ – ದಿವಾಳಿ ಫಿರ ಆಗಯಿ ಎಂಬಂತೆ)

ನೀವೆಲ್ಲ ಪರಮತ್ಮನೆ ಏಳಿ।
ಸಾರುವೆ ಈ ನುಡಿ ಕೇಳಿ ॥ ಪ ॥

ತುಂಬಿಹ ಜಗವನು ನಿಮ್ಮೊಳಗಿರನೇ
ಆಲೋಚಿಸಿರೀನುಡಿಯಾ।
ನಂಬಿರಿ ಶ್ರುತಿಶಿರ ಸಾರಿತು ಪರಮನು।
ಹೃದಯದ ಗುಹೆಯೊಳಗಿರುವಾ ॥
ಕಾಂಬನು ಗುಹೆಗಳ ಕಳೆದುಳಿದಾ ನಿಜ।
ಸಂಪೂರ್ಣಪದವೇ ಪರಾನಂದಾ ॥ ೧ ॥

ಸ್ಥೂಲದೇಹಮೊದಲಾಗಿಹ ಗುಹೆಗಳ।
ನೈದನು ಕಳೆಯಲು ಉಳಿವಾ।
ಮೂಲರೂಪ ಪರಮಾತ್ಮನೆ ತಾನೆಂ।
ದರಿಯುತ ತಿಳಿಯಿರಿ ನಿಜವಾ ॥
ತಿಳಿಯಿರಿ ನಿರುತದಿ। ನೀವೇ ಆ ಪದ।
ಕಳೆದು ಪೇಳ್ದ ಮಾಯಾ ಶಂಕರಾರ್ಯ ॥ ೨ ॥

– ದೇವ

## ೧೨೬

**ರಾ. ಬಿಲಾವಲ್** **ತಾ. ದಾದರಾ**

ನೀನೆ ನಿರಂಜನ ಪರಮಾತ್ಮ।
ಸ್ವಾನುಭವವ ಪಡೆದು ನೋಡು ॥ ಪ ॥

ಬಿಡು ದೇಹದಿ ಆತ್ಮಭಾನ।
ಪಡೆ ಗುರುವಿನ ದಿವ್ಯ ಜ್ಞಾನ।
ನುಡಿ ಮನಸಿಗೆ ನಿಲುಕದಿರುವ।
ಕಡೆ ಇಲ್ಲದ ಸ್ಥಿತಿಯ ನೋಡು ॥
ಒಡಲುಪ್ರಾಣಮನಾದಿಗಳು।

ಜಡವಾದವು ಎಂದು ತಿಳಿದು ।
ದೃಢನಿಶ್ಚಯದಿಂದ ಕಳೆಯೆ ।
ಕಡೆಗುಳಿಯುವ ಮೂಲರೂಪ ॥ ೧ ॥

ಪರಮಾತ್ಮನ ನೋಡುವುದಕೆ ।
ಹೊರಗೆಲ್ಲಿಯು ಹೋಗಬೇಡ ।
ಭರಿತನವನು ವಿಶ್ವದಲ್ಲಿ ।
ಇರನೆ ನಿನ್ನ ಹೃದಯದಲ್ಲಿ ॥
ಮರೆಯದೆ ಈ ನುಡಿಯ ಬೇಗ ।
ಅರಿತುಕೊಳ್ಳು ನಿನ್ನ ರೂಪ ।
ಪರಮಪದವ ಪೊಂದುವಿ ನೀ ।
ಗುರುಶಂಕರನುಕ್ತಿಯಂತೆ ॥ ೨ ॥

– ದೇವ

**ರಾ. ಕರ್ನಾಟಕಿ** **೧೨೭** **ತಾ. ಆದಿತಾಳ**

ಪರಸುಖಕರಾ । ಗುರುಬೋಧಸಾರಾ ।
ಮರಣಾ ಜರಾ । ದುರಿತಾದಿ ದೂರಾ ॥ ಪ ॥

ಜೀವಭಾವವಾ । ಸಟೆಯಾಗಿ ಗೈವ ।
ದೇವಭಾವವಾ । ಬಗೆನಿಲಿಸುವಾ ॥
ಸಾವಿನಂಜಿಕೆ । ದೂರಾಗಿ ಮಾಳ್ಪ ।
ಜೀವಂತಮುಕುತಿ । ಕರೆದೀಯುವಾ ॥ ೧ ॥

ದೃಶ್ಯವೆಂದು ತೋರ್ಪ । ವಿಶ್ವತ್ಯಾಗ ಮಾಡಿ ।
ದೃಶ್ಯವಸ್ತುವಿಂದ । ಬೇರೆನಿಸುವಾ ॥
ಶಾಶ್ವತಾದ ಆ । ಪದ ತೋರಿ ಮನದ ।
ಕಶ್ಮಲವನು ಕಳೆವ । ಭವತಾರಕಾ ॥ ೨ ॥

ಭೇದಭಾವವಾ । ಭೇದಿಸುತ ಮನದಿ ।
ಬೋಧನಾರಾಯಣನ । ಕೃಪೆ ಪೊಂದಿದಾ ॥
ಬೋಧರೂಪ ಗುರುವು । ಪೇಳಿರ್ದ ಬೋಧ ।
ಸಾಧು ಶಂಕರಾರ್ಯ । ತಾನೆನ್ನುವಾ ॥ ೩ ॥
– ದೇವ

## ೧೨೮

(ಚಾಲ – ಪ್ರೀತಿ ಜೀವನದ ಜ್ಯೋತಿ ಎಂಬಂತೆ)

ಬೋಧಾ । ಜ್ಞಾನದಾ । ಬೋಧಾ ।
ಮೋದಾ । ಶಾಂತಿಯಾ ಸ್ವಾದಾ ॥ ಪ ॥

ಸ್ವರೂಪದಾ । ಸುಖಾಸ್ಪದಾ । ಪ್ರಶಾಂತ ಗುರುಬೋಧಾ ।
ಮೋದಾ । ಜ್ಞಾನದಾ ಬೋಧ ॥ ಅ.ಪ. ॥

ಸುಲಭಸಾಧ್ಯ ಸುವಿಚಾರಾ ।
ವೇದಾಂತಶಾಸ್ತ್ರದ ಸಾರಾ ।
ತಾನೇ ಪರಮಾತ್ಮನು ಎನುವಾ ॥
ಸ್ವಾನುಭವಾಮೃತಜಲಧರಾ ।
ಘೋರಾ ಸಂಸ್ಕೃತಿಯ ಪಾರಾ ॥ ೧ ॥

ಜೀವಭಾವವ ಮರೆಯಿಸುತಿರುವಾ ।
ಸಾವ ನೀಗುವಾ । ಮಂತ್ರವಾ ॥
ಸಾರಿ ಪೇಳ್ವ । ಶಂಕರಾರ್ಯ ।
ಮೋದಾ । ಶಾಂತಿಯಾ ಸ್ವಾದಾ ॥ ೨ ॥

– ದೇವ

## ೧೨೯

**ರಾ. ದುರ್ಗಾ** **ತಾ. ಝಂಪಾ**

ಸೋಜಿಗದ ಸುದ್ದಿಯನು ಮಾಜದಲೆ ಪೇಳ್ವೆ ।
ಈ ಜಗದ ಬಹುಜನಕೆ ನೈಜವೆಂದೆನಿಸದಿಹ ॥ ಪ ॥

ನೋಡೆ ಕಣ್ಣಿಲ್ಲ ಮಾತಾಡೆ ನಾಲಿಗೆಯಿಲ್ಲ ।
ಮಾಡೆ ಕೈಯಿಲ್ಲ ಓಡಾಡೆ ಕಾಲಿಲ್ಲ ॥
ಬೇಡಲ್ಕೆ ಬಗೆಯಿಲ್ಲವಾಗಿ ಚಿರಸೌಖ್ಯದ ।
ಬೀಡಾದ ನಿತ್ಯದಲಿ ರೂಢವಾಗಿದ್ದ ॥ ೧ ॥

ಕನಸ ಕಂಡಿದ್ದಿಲ್ಲ ಎಚ್ಚರದೊಳಿದ್ದಿಲ್ಲ ।
ತನಿ ನಿದ್ರೆಯೆಂದೆನಗೆ ತೋರಲಿಲ್ಲ ॥
ಜನುಮದೊಳಗೊಮ್ಮೆಯೂ ಅನುಭವಕೆ ಬಾರದ ।
ತನುವಡಗಿ ಮನವುಡುಗಿ ಚಿನುಮಯನೆ ಆದ ॥ ೨ ॥

ಮೂರವಸ್ಥೆಗಳನ್ನು ಮೀರಿ ಬೇರಾಗಿದ್ದ ।
ಪಾರಮಾರ್ಥಿಕವಾದ ಸ್ವಾರಾಜ್ಯದ ॥
ಧೀರಗೆ ಸಮೀಪಾದ ಭೀರುವಿಗೆ ದೂರಾದ ।
ನಾರಾಯಣನ ಬೋಧಸಾರರೂಪಾದ ॥ ೩ ॥

**– ಶ್ರೀ ಶಂಕರ**

**ರಾ. ಪಹಾಡಿ** **೧೩೦** **ತಾ. ಕವಾಲಿ–ದೀಪಚಂದಿ**

(ಚಾಲ – ಆನಂಹಸೇ ಬಾಸರಿ ಸುನೋ ಸಖಿ ಎಂಬಂತೆ)

ಆನಂದವಾ ನೋಡು ನೀ । ವಿಚಾರಿಸಿ ।
ಏನೊಂದುಮಿಲ್ಲಾಗಿ । ತಾನೆ ತಾನಾಗಿಹ ॥ ಪ ॥

ಅನಿಸಿಕೆ ತೋರಿಕೆ ಅಡಗುತಲಿರುತಿರೆ ।
ತನಿನಿದ್ರೆಯೆನಿಸದ ಘನಪದವಾಗಿಹ ॥
ಮನಸಿನಿಂದಾಚೆಗೆ ನಿಜವಾಗಿ ನೆಲಗೊಂಡ ॥ ೧ ॥

ವಚನ
ಇದೇ ಬ್ರಹ್ಮಾನಂದವು ನೋಡೈ । ಸದಾ ।
ನಿರ್ವಿಕಲ್ಪವಾಗಿರುವಾ । ಆ ಸ್ಥಿತಿಯನೆ ಗುರುತಿಸಿ ॥
ಅನುಭವಿಸುತದನಾ ॥

ಮರಳಿ ಜಾಗರದಲಿ ನೆನಸಿ ಆ ಸ್ಥಿತಿಯನು ।
ಮರಣರಹಿತವದು ಅದೇ ಪರಮಾತ್ಮನು ।
ಗುರುಶಂಕರನು ಪೇಳ್ದ ಅದೇ ತಾನು ಎನ್ನುತ ॥ ೨ ॥

**– ದೇವ**

**೧೩೧**

(ಚಾಲ – ಉಂಚಿ ಉಂಚಿ ದುನಿಯಾಕಿ ಎಂಬಂತೆ)

ಚಿಂತೆಯ ನೀಗೀ । ಭ್ರಾಂತಿಯ ನೀಗಿ । ಶಾಂತಿಯಹೊಂದಿ ।
ಧನ್ಯನಾದೆ ಧನ್ಯನಾದೆ । ಗುರುವೇ ।
ಪರಮದಯಾಘನ । ನೀ ಕಲ್ಪತರುವೇ ।
ನಮಿಸುವೆ ಶಂಕರಗುರುವೆ ॥ ಪ ॥

ಕರ್ಮವನಾ । ಪರಧರ್ಮವನಾ । ಗುರು
ನಿನ್ನಯ ದಯದಿಂ ನೀಗಿದೆನಾ ॥
ತಾನೊಂದೇಯಾಗಿಹ । ಭಾನವಮೀರಿಹ ।
ಆನಂದರೂಪನೆ ನಾನಾದೆನ್ನೈ । ಪಾರಾದೆನ್ನೈ ।
ಶ್ರೀಗುರುವೇ ನಮಿಸುವೆ ಶಂಕರಗುರುವೆ ॥ ೧ ॥

ಆತ್ಮನೆ ನಾ ಪರಮಾತ್ಮನೆ ನಾ । ಘನ
ಚಿನ್ಮಯರೂಪನೆ ಆಗಿಹೆ ನಾ ।
ಬಂಧವು ಕಳಚಿತ್ತೈ । ಸಂದೇಹ ನೀಗಿತ್ತೈ ।
ನಿನ್ನ ಬೋಧದಿ ಮುಕ್ತನಾದೆನ್ನೈ । ಪಾರಾದೆನ್ನೈ ।
ಶ್ರೀಗುರುವೇ ನಮಿಸುವೆ ಶಂಕರಗುರುವೆ ॥ ೨ ॥

ದೇಹವಾಸನೆ । ಶಾಸ್ತ್ರವಾಸನೆ ।
ಲೋಕದ ವಾಸನೆ । ಹೋಯಿತಿದೋ ॥
ಸೋಹಮೆಂಬ ಜ್ಞಾನವಾಗಿ । ಮೋಹವೆಲ್ಲ ನಾಶವಾಗಿ
ಆಹಾ! ಶಂಕರಗುರೊ । ಮುಕ್ತನಾದೆ । ಯುಕ್ತನಾದೆ ।
ಗುರುವೆ ನಮಿಸುವೆ ಶಂಕರಗುರುವೆ ॥ ೩ ॥

– ಜಯಮ್ಮ

## ೧೩೨

**ರಾಗ. ಬಾಗೇಶ್ರೀ** **ತಾ. ದಾದರಾ**

ಏನಿದೇನಿದು । ಆಹಹ । ಏನಿದೇನಿದು ।
ಶೂನ್ಯದಂತೆ ತೋರುತಿಹುದು । ಧನ್ಯತೆಯನು ಬೀರುತಿಹುದು ॥ ಪ ॥

ನೋಡದ ಕಂಗೊಳಿಪ ನೋಟ । ತೀಡದ ತಣ್ಣೆಲರ ತೀಟ ॥
ಊಡದ ಸವಿ ಸೊಗಸಿನೂಟ । ಕೂಡದ ಸಂತೋಷ ಕೂಟ ॥ ೧ ॥

ಮರವಿಗೆ ಮರವಾದುದೇನೊ । ಅರಿವಿಗೆ ಅರಿವಾದುದೇನೊ ॥
ಮರಣಕೆ ಮೃತಿಯಾದುದೇನೊ । ಹರುಷಕೆ ಹರುಷಾದುದೇನೊ ॥ ೨ ॥

ನೋವು ಎಲ್ಲಿ ನೆನಪು ಎಲ್ಲಿ । ಭಾವವೆಲ್ಲಿ ಭಕುತಿ ಎಲ್ಲಿ ॥
ಜೀವನೆಲ್ಲಿ ದೇವನೆಲ್ಲಿ । ಹಾವು ಎಲ್ಲಿ ಹಗ್ಗವೆಲ್ಲಿ ॥ ೩ ॥

ಧ್ಯಾನದೆಣ್ಣೆಯುರಿದು ಹೋಗಿ । ಜ್ಞಾನದೀಪ ಕಾಣದಾಗಿ ॥
ಮೌನ ಸ್ವಾನುಭಾವವಾಗಿ । ತಾನು ಬೇರೆ ಇಲ್ಲದಾಗಿ ॥ ೪ ॥

ದೇಹವಿಲ್ಲ ದೇಹಿಯಿಲ್ಲ । ಮೋಹವಿಲ್ಲ ಮಹಿಮೆಯಿಲ್ಲ ॥
ಕೋಹಮಿಲ್ಲ ಸೋಹಮಿಲ್ಲ । ಆಹಾ ತಾನೆ ಎಲ್ಲ ॥ ೫ ॥

ನರಜನ್ಮದ ಪರಮಪುಣ್ಯ । ಪರಮಾತ್ಮಜ್ಞಾನಗಮ್ಯ ॥
ಗುರುನಾರಾಯಣನೆ ಮಾನ್ಯ । ಅರೆರೆ ನಾನೆ ಧನ್ಯ ಧನ್ಯ ॥ ೬ ॥

– ಶ್ರೀಶಂಕರ

## ೧೩೩

**ರಾ. ಭೈರವಿ** **ತಾ. ತ್ರಿವಟ**

ಆರತಿ ಬೆಳಗುವೆ ಚಿನ್ಮಯಮೂರುತಿ ಸದ್ಗುರುನಾಥನಿಗೆ ।
ಮೀರಿದ ಮಹಿಮಗೆ ದೇವರ ದೇವಗೆ ಭಾವಾತೀತನಿಗೆ ॥ ಪ ॥

ಬಾಧೆಗಳೆಲ್ಲವ ನಿಗಲು ಸಜ್ಜನಶಾಸ್ತ್ರ ಸಂಗಬಲದಿ ।
ಸಾಧನೆ ನಾಲ್ಕನು ಸಾಧಿಸಿ ಬಂದಿಹ ಸಾಧಕರಿಗೆ ಮುದದಿ ।
ಬೋಧೆಯ ಮಾಡುತ ಮುಕುತಿಯ ದಾರಿಯ ತೋರಿದೆಯ್ಯ ದಯದಿ ॥ ೧ ॥

ಎಚ್ಚರೆಂಬುವದು ಕನಸಿನಂದದಿ ತುಚ್ಛವೆಂದು ಬಗೆದು ।
ಮುಚ್ಚಿದಂತಿರುವ ನಿದ್ರೆಯನರಿಯುವ ಸಾಕ್ಷಿಯೆ ನೀನೆಂದು ।
ಸ್ವಚ್ಛವಾಗಿ ತಿಳಿಯೆಂದು ಬೋಧಿಸಿದ ಮಹಿಮಗೆ ನಾನಿಂದು ॥ ೨ ॥

ಬರಿ ಅರಿವೇ ಪರವಸ್ತುವು ಅದುವೇ ನೀನೆಂದರುಹಿದಗೆ ।
ಬರಿಯಭ್ರಮೆಯು ಜಗಜೀವರೆಂಬುದು ಕನಸೆಂದುಸುರಿದಗೆ ।
ಶರಣು ಬಂದ ಶಂಕರನುದ್ಧರಿಸಿದ ಗುರುನಾರಾಯಣಗೆ ॥ ೩ ॥

– ಶ್ರೀಶಂಕರ

## ೧೩೪

**ರಾ. ಭೈರವಿ** **ತಾ. ತ್ರಿವಟ**

ಮಂಗಲಂ ಗುರುರಾಜಗೆ ।
ಮಂಗಲ ಪರಮಾನಂದ ಸ್ವರೂಪಗೆ ॥ ಪ ॥

ಜೀವಪರಮರೈಕ್ಯವ ತಿಳುಹಿಸುವಾ ।
ದೇವನೆ ನೀನೆನ್ನುತ ಬೋಧಿಸುವಾ ॥
ಸಾವು ಸಂಕಟಗಳ ಮೂಲವ ಕಡಿಯುವಾ ।
ಪಾವನಾತ್ಮ ಘನಜ್ಞಾನಸ್ವರೂಪಗೆ ॥ ೧ ॥

ವೇದವೇದಾಂತದ ಸಾರವ ತಿಳುಹಿ ।
ಶೋಧಿಸಿ ದೇಹತ್ರಯಗಳ ಕಳಹಿ ॥
ಬಾಧರಹಿತ ಪರಮಾತ್ಮನ ಅರಿವನು ।
ಬೋಧಿಸಿ ಅನುಭವದಲಿ ನೆಲೆಸಿದಗೆ ॥ ೨ ॥

ತೋರಿಕೆ ಅನಿಸಿಕೆ ಎನಿಸುವ ದ್ವೈತವ ।
ಧೀರತನದಿ ಸುಳ್ಳೆಂದು ತಿಳಿಸುವಾ ॥
ನಾರಾಯಣಗುರುವರನ ಕೃಪಾಪ್ರಿಯ
ಪೂರಣಬ್ರಹ್ಮಸ್ವರೂಪ ಶಂಕರಗೆ ॥ ೩ ॥

– ದೇವ

## ೧೩೫

**ರಾ. ಭೈರವಿ** **ತಾ. ದಾದರಾ**

ಮಂಗಲವಾ ಪಾಡುವೆನಾ ।
ಮಂಗಲಾಂಗ ಗುರುದೇವಗೆ ॥
ಸಂಗರಹಿತ ಸಂಪೂರ್ಣಗೆ ।
ಕಂಗೊಳಿಸುವ ಪರಮಾತ್ಮಗೆ ॥ ಪ ॥

ಬೋಧಿಸುತಲಿ ಪ್ರೇಮದಿಂದ ।
ಸಾಧನೆ ಸಾಧ್ಯಗಳ ಮರ್ಮ ॥
ಛೇದಿಸುತಲಿ ಭವಜಾಲವ ।
ಮೋದವೀವ ಘನ ಮಹಿಮಗೆ ॥ ೧ ॥

ಬಲು ಶಾಸ್ತ್ರದ ತೊಡಕಿಲ್ಲದೆ ।
ಸುಲಭದಿಂದ ಬೋಧಿಸುವಾ ॥
ತಿಳಿ ಆತ್ಮನೇ ನೀನೆನ್ನುತ ।
ಘನ ಶಾಂತಿಯ ನೀಡಿದವಗೆ ॥ ೨ ॥

ನಾರಾಯಣ ಗುರುದೇವನ ।
ಪರಮಪ್ರೀತಿ ಪಾತ್ರನೀತ ॥
ಧರೆಯೊಳಗವತರಿಸಿದ ಶ್ರೀ ।
ಗುರುಶಂಕರದೇವನಿಗೆ ॥ ೩ ॥

**– ದೇವ**

## ೧೩೬

**ರಾ. ಭೈರವಿ** **ತಾ. ಕೇರವಾ**

ನಾ ಬೆಳಗುವೆನಾರತಿಯಾ ।
ಗುರುಸಾರ್ವಭೌಮನಿಗೆ ॥ ಪ ॥

ಅನುಭವರೂಪನಿಗೆ ।
ನಿಜ ಜ್ಞಾನವ ಬೋಧಿಪಗೆ ॥
ಚಿನುಮಯ ರೂಪನಿಗೆ ।
ನಿಜ ಬ್ರಹ್ಮಾನಂದನಿಗೆ ॥ ೧ ॥

ಶಾಂತಿಯ ನೀಡುವಗೆ ।
ಬಲು ಭ್ರಾಂತಿಯ ನೀಗಿಪಗೆ ॥
ಚಿಂತೆಯ ಕಳೆದವಗೆ ।
ಆದ್ಯಂತ ವಿಹೀನನಿಗೆ ॥ ೨ ॥

ಬಂಧವ ಹರಿಸಿದಗೆ ।
ಆನಂದದಿ ಬೋಧಿಪಗೆ ॥
ವಂದಿಪೆ ದೇವನಿಗೆ ।
ಶ್ರೀ ಶಂಕರ ರೂಪನಿಗೆ ॥ ೩ ॥

## ೧೩೭

**ರಾ. ಭೈರವಿ** **ತಾ. ದಾದರಾ**

ಚರಣಕಮಲಕರ್ಪಿಸುವೆ ।
ಗುರುನಾಥಾ ಈ ಸೇವೆಯ ॥
ಕರುಣನಿಧಿಯೆ ಜ್ಞಾನರೂಪ ।
ಪರಮಾತುಮ ಪರಮಪುರುಷ ॥ ಪ ॥

ರಾಜವಿದ್ಯೆ ರಾಜಗುಹ್ಯ ।
ಆತ್ಮತತ್ವ ಬೋಧಿಸಿ ನೀ ॥
ಮೂಢತನದ ತಮವ ಕಳೆದು ।
ತೇಜದಿಂದ ಮೆರೆವ ನಿನ್ನ ॥ ೧ ॥

ಬಾಲನ ತೊದಲಾದ ನುಡಿಯ ।
ಕೇಳಿ ಜನಿಸಿ ನಲಿವ ತೆರದಿ ॥
ಲೀಲೆಯಿಂದ ಆಲಿಸುತಲಿ ।
ಪಾಲಿಸು ಗುರುಶಂಕರನೆ ॥ ೨ ॥

**ಬ್ರ.ಭೂ. ಸದ್ಗುರು ಶ್ರೀ ಶಂಕರಭಟ್ಟರು ಅಗ್ನಿಹೋತ್ರಿ**
**ಇವರ**
**ಚರಣಕಮಲ ಸ್ಮರಣೆಗಾಗಿ**
**ಅರ್ಪಣೆ**

# ಗ್ರಂಥರಚನಾಸಾಮರ್ಥ್ಯ–ಕವಿತ್ವ–ಸಂಗೀತಜ್ಞಾನ–ಉಪನ್ಯಾಸಕಲೆ–ಬಹುಭಾಷಾಪಟುತ್ವ–ಹರಿಕಥಾ ಕೀರ್ತನ ಮುಂತಾದ ಬಹುಮುಖ ಪ್ರತಿಭಾವಂತರಾದ

## ಶ್ರೀ ದೇವರಾಯಕುಲಕರ್ಣಿಯವರಿಂದ ರಚಿತವಾದ ಕೆಲವು ಗ್ರಂಥಗಳು

೧. ಶಂಕರಸಂಸ್ಮರಣ ಮತ್ತು ಶಂಕರ ಸಿದ್ಧಾಂತ ಸಂಸ್ಮರಣ

೨. ಶಾಂಕರವೇದಾಂತ ಸೌರಭ

೩. Adhyama Yoga

೪. ಶ್ರವಣ, ಮನನ, ನಿಧಿಧ್ಯಾಸನ

೫. ವೇದಾಂತ ಲೇಖನ ಮಾಲೆ

೬. ಆತ್ಮಜ್ಞಾನ ಲಹರಿ (ಪದಗಳ ಸಂಗ್ರಹ)

೭ ಶಂಕರ ದರ್ಶನ (ಬ್ರಹ್ಮಜ್ಞವಚನ–ತ್ರಿಪದಿ)

೮. ಅಧ್ಯಾತ್ಮಯೋಗ (ಕನ್ನಡ)

೯. ಶ್ರೀಭಗವದ್ಗೀತಾ ಲಾವಣಿ

೧೦. ಶ್ರೀದತ್ತನಾಮಾಮೃತ

೧೧. ಗಣೇಶವಿದ್ಯೆ

೧೨. ವೇದಾಂತದ ಒಳಗಣ್ಣು

೧೩. Avasthaatraya Viveka Prakriya

೧೪. Teachings of Brahman through the attribution of Avidya & Maya

೧೫. Guidelines to Shankaravedanta

# ಪ್ರಕಟನೆಗೆ ಉದಾರವಾಗಿ ಸಹಾಯ ಮಾಡಿದ ದಾನಗಳ ವಿವರ

## ಬೆಂಗಳೂರು

| | | | |
|---|---|---|---|
| 1. | ಆರ್.ಬಿ.ಗೋಪಿನಾಥ್ | ಬೆಂಗಳೂರು | 2000 |
| 2. | ಶಾರದ ಜಿ ದೇಸಾಯ್ | ಬೆಂಗಳೂರು | 1001 |
| 3. | ಶಾರದಮ್ಮ | ಬೆಂಗಳೂರು | 1001 |
| 4. | ಸರೋಜ ನಾರಾಯಣ | ಬೆಂಗಳೂರು | 1001 |
| 5. | ಸುಧಾ ಜೋಶಿ | ಬೆಂಗಳೂರು | 1001 |
| 6. | ಶುಭದ ವಿ ಹಂಪಿಹೊಳಿ | ಬೆಂಗಳೂರು | 1001 |
| 7. | ಶುಭದ ಕುದ್ದಾರ್ | ಬೆಂಗಳೂರು | 1001 |
| 8. | ವಾಣಿ ಪುರೋಹಿತ್ | ಬೆಂಗಳೂರು | 1001 |
| 9. | ರಾಮಣ್ಣ ದಂಡವತಿ | ಬೆಂಗಳೂರು | 1101 |
| 10. | ಸಂಜನ ಬಡಗಿಂಡಿ | ಬೆಂಗಳೂರು | 1001 |
| 11. | ಗೀತಾ ಆರ್ ವರಖಿಡಿ | ಬೆಂಗಳೂರು | 1001 |
| 12. | ಲಕ್ಷ್ಮೀಪತಿ | ಬೆಂಗಳೂರು | 1001 |
| 13. | ಶಿವಲಿಂಗಪ್ಪ | ಬೆಂಗಳೂರು | 1000 |
| 14. | ರಘುನಂದನ್.ಎನ್ | ಬೆಂಗಳೂರು | 1000 |
| 15. | ಗಾಯತ್ರಿ | ಬೆಂಗಳೂರು | 500 |
| 16. | ಉಷಾ ಬಿ ನಾಯಕ್ | ಬೆಂಗಳೂರು | 500 |
| 17. | ಸುಶೀಲಮ್ಮ | ಬೆಂಗಳೂರು | 101 |
| 18. | ಪಾರಿಜಾತ | ಬೆಂಗಳೂರು | 500 |

## ಗ್ರಂಥಕರ್ತರ ಕಿರುಪರಿಚಯ

## ಶ್ರೀ ಬ್ರಹ್ಮಕವಿ ಶ್ರೀ ದೇವರಾಯ ಕುಲಕರ್ಣಿ (ಹೊಂಬಳ)

(೧೯೨೨-೧೯೯೩)

ಕರ್ನಾಟಕ ರಾಜ್ಯದ ಗದಗ ಜಲ್ಲೆಯ ಹೊಂಬಳ ಗ್ರಾಮದವರಾದ, ಆಗ ರ್ಭಶ್ರೀಮಂತರಾದ ರಾಘವೇಂದ್ರರಾಯರ ಪುತ್ರರಾದ ಶ್ರೀ ದೇವರಾಯ ಕುಲಕರ್ಣಿ ರವರು ತಾ॥ ೨-೧೨-೧೯೨೨ ರಲ್ಲಿ ಜನಿಸಿದರು. ಅನಂತರ ಪ್ರಾಪ್ತವಯಸ್ಕರಾದಾಗ ಶ್ರೀ ಅಗ್ನಿಹೋತ್ರಿ ಶಂಕರ ಭಟ್ಟರೆಂಬ ಗುರುಗಳಲ್ಲಿ ಸಂಸ್ಕೃತ ಭಾಷೆ ಹಾಗೂ ಅರ್ವಾಚೀನ ವೇದಾಂತ ಸಂಪ್ರದಾಯದಂತೆ ಶಂಕರ ವೇದಾಂತಾಧ್ಯಯನ ಮಾಡಿದರು. ೧೯೫೪ರಿಂದ ಹೊಳನರಸೀಪುರದ ಪೂಜ್ಯ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಮಹಾಸ್ವಾಮಿಗಳ ಶಿಷ್ಯರಾಗಿ ಶಾಂಕರ ವೇದಾಂತವನ್ನು ಪ್ರಸ್ಥಾನತ್ರಯ ಶಂಕರ ಭಾಷ್ಯಾನುಸಾರವಾಗಿ ಅಧ್ಯಯನ ಮಾಡಿ ಪ್ರವಚನ ಹಾಗೂ ಗ್ರಂಥ ರಚನೆಗಳ ಮೂಲಕ ವೇದಾಂತ ತತ್ತ್ವ ಪ್ರಚಾರವನ್ನು ದೇಶವಿದೇಶಗಳಲ್ಲಿ ಕೈಗೊಂಡರು. ೧೯೫೬ರಿಂದ ಬೆಂಗಳೂರು ನಗರದಲ್ಲಿ ನೆಲೆಸಿದರು.

ಸಂಸ್ಕೃತ, ಕನ್ನಡ, ಮರಾಠಿ, ತೆಲಗು, ಇಂಗ್ಲೀಷ್-ಭಾಷಾಭಿಜ್ಞರಾದ ಗ್ರಂಥ ಕರ್ತರು ತಮ್ಮ ಸಾವಿರಾರು ವೇದಾಂತಪ್ರವಚನಗಳ ಮೂಲಕ ಶಂಕರ ಸಿದ್ಧಾಂತವನ್ನು ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳಲ್ಲಿ ಪ್ರಚಾರ ಮಾಡಿ ವಿದ್ವಾಂಸರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಕೆಲವು ವಿದೇಶೀಯ ಜಿಜ್ಞಾಸುಗಳಿಗೂ ಶಾಂಕರ ವೇದಾಂತವನ್ನು ಬೋಧಿಸಿದ್ದಾರೆ. ಸಾಧನ ಮಾರ್ಗದಲ್ಲಿಯೂ ಅನುಭವಿಗಳಾಗಿದ್ದು ಶ್ರೀ ದತ್ತಗುರುವಿನ ಉಪಾಸಕರೂ ಶಿಷ್ಟಾಚಾರ ಸಂಪ್ರದಾಯವಂತರೂ ಆಗಿದ್ದು ತಾ॥ ೭-೧೨-೧೯೯೩ ರಂದು ತಮ್ಮ ೭೨ನೆಯ ವಯಸ್ಸಿನಲ್ಲಿ ದೈವಾಧೀನರಾದರು. ಈ ಮಹನೀಯರ ಅಮೋಘವಾದ ಅಧ್ಯಾತ್ಮ ವಿದ್ಯಾ ಪ್ರಚಾರ ಸೇವೆಗೆ ಜಿಜ್ಞಾಸುಗಳೆಲ್ಲರೂ ಕೃತಜ್ಞರಾಗಿದ್ದೇವೆ.